# ಕರ್ನಾಟಕ ಲೋಚನ

ಸಂಪುಟ ೯ ಜೂನ್ ೧೯೯೬ ಸಂಚಿಕೆ ೧

-೨೭-



## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು-೫೬೦ ೦೧೯

# "ಕರ್ನಾಟಕ ಲೋಚನ"

## ಸಂಪಾದಕ ಮಂಡಲಿ



## ಲೇಖನಗಳು— ಟಿಪ್ಪಣಿಗಳು

ಸಂಶೋಧನಾತ್ಮಕ, ಪಾಂಡಿತ್ಯ-ವಿದ್ವತ್ ಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು- ಇವುಗಳ ಮೇಲಣ ವಿಮರ್ಶೆಗಳು ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ-ಟಿಪ್ಪಣಿಗಳು - ಇವುಗಳಿಗೆ 'ಕರ್ನಾಟಕ ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು ; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ವಾಕ್ಯಖಂಡದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ 6-8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು ( Bibliography ) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಎಂ. ವಿ. ಸೀತಾರಾಮಯ್ಯರಸ್ತೆ,
ಮಾಸ್ತಿನಗರ, (ಗವೀಪುರ ವಿಸ್ತರಣ), ಬೆಂಗಳೂರು-560 019.

ಸಂಪಾದಕರು : ವಿದ್ವಾನ್ ಟಿ. ಕೇಶವ ಭಟ್ಟ

ಸಹಾಯಕ ಸಂಪಾದಕರು : ಎಸ್. ಎಸ್. ರಾಮಸ್ವಾಮಿ ಅಯ್ಯರ್

ಸಂಪುಟ ೯ ಜೂನ್ ೧೯೯೦ ಸಂಚಿಕೆ ೧

### ಪ ರಿ ವಿ ಡಿ

1. ಸಮಸ್ಯಾ ಪೂರಣ iii
2. ಸರಸ್ವತೀ ಮತ್ತು ದೃಷದ್ವತೀ — ಸೇಡಿಯಾಪು ಕೃಷ್ಣಭಟ್ಟ 1
3. ಅರ್ಜುನವಾಡದ ಶಿಲಾಲೇಖ — ಎಚ್. ದೇವೀರಪ್ಪ 8
4. ನನ್ನೂಲ್ ನೋಟ — ಸಿ. ನಟರಾಜ್ 14
5. ಆರಭಟೀ ವೃತ್ತಿಯ ಹಿನ್ನೆಲೆಯಲ್ಲಿ ನೃತ್ಯದ ಸಾಹಿತ್ಯಕ ವರ್ಣನೆ 26
— ಎಸ್. ಜಗನ್ನಾಥ
6. ಪವಾಡ ಕಥೆಗಳ ಹಿನ್ನೆಲೆಯಲ್ಲಿ ಸಿದ್ಧರಾಮನ ಇತಿವೃತ್ತ ಹಾಗೂ ವ್ಯಕ್ತಿತ್ವ 35
— ಡಾ|| ವ್ಹಿ. ಜಿ. ಪೂಜಾರ್
7. ತಿರುಪ್ಪಾವೈ ಆಚರಣೆ – ಇನ್ನೊಂದು ದೃಷ್ಟಿ 49
— ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ಯ
8. ಕೇಶಿರಾಜನ ಶಬ್ದಮಣಿದರ್ಪಣದ ಮತ್ತೊಂದು ರೂಪದ ಪ್ರತಿ 56
— ಜಿ. ಎ. ಶಿವಲಿಂಗಯ್ಯ
9. ಟೀಕೆ–ಟಿಪ್ಪಣಿಗಳು
ಅ. ಭೀಮನಿಂದ ದುಶ್ಯಾಸನನ ರಕ್ತಪಾನ — ಭೀಮರಾವ್ ಚಿಟಗುಪ್ಪಿ 67
ಆ. ಛಂದೋ ವಿಚಾರ – ಒಂದು ಟಿಪ್ಪಣಿ — ಟಿ. ಕೇಶವ ಭಟ್ಟ 71
ಇ. ಛಂದಸ್ಸಿನಾದ್ಯತೆ ಹಾಗೂ ನವವೃತ್ತಾವಿಷ್ಕರಣ-ಮೆಚ್ಚುಗೆ 73
ರಾ. ಸತ್ಯನಾರಾಯಣ
ಈ. ನುಡಿಗೆಲ್ಲಂ ಸಲ್ಲದ–ನುಡಿಗಟ್ಟಿನ ಕೇಂದ್ರಬಿಂದು 77
— ಪ್ರೊ. ಸಿ. ಮಹಾದೇವಪ್ಪ
10. ಗ್ರಂಥವಿಮರ್ಶೆ 81
11. ಪ್ರತಿಷ್ಠಾನ ವಾರ್ತೆ 89
12. ಅಭಿನಂದನೆ 96
13. ಶ್ರದ್ಧಾಂಜಲಿ 89

# Karnataka Lochana

Half-Yearly Journal, Published by B. M. Sri Smaraka Prathisthana, M. V. Seetha Ramaiah Road, Masthi Nagar, (Gavipuram Extension) Bangalore-560 019



Vol. IX June 1996 No. 1

CONTENTS

1. Samasya Poorana iil
2. Saraswathi and Drushadwati —Sediyapu Krishna Bhat 1
3. The Inscription of Arjunwada — H. Deveerappa 8
4. " Nannul Nota ! — C. Nataraj 14
5. A Literary approach to ' Nrutya ' in the backdrop of ' Arabhati vrutti , — S. Jagannath 26
6. Siddharama,s Life and personality as propounded in Legendry Stories. —Dr. V.J. Poojar 35
7. The Observance of Tiruppavai : Another View — Valmiki Srinivasa Iyengar 49
8. Kesirja's Shabdamani Darpana : Yet Another Manuscrip —G. A. Shivalingaiah 56
9. NOTES & COMMENTS :
   i. Bheema's sucking blood of Dusshasana — Bheema Rao Chitguppi 67
   ii. Chando Vichara : A Note — T. Keshav Bhat 71
   iii. The Prepondarance of Prosody and Discovery of New Vrinttas — Ra. Satyanarayana 73
   iv. "Nudigellam Sallada"— Pro. C. Mahadevappa 77
10. Book Review 81
11. News of B. M. Sri Prathlsthana 89
12. Felicitations 96
13. Tributes 98

# ಸಮಸ್ಯಾ ಪೂರಣ

( ವಿದ್ವತ್ಪತ್ರಿಕೆಯಾಗಿರುವ ಈ 'ಕರ್ನಾಟಕ ಲೋಚನ' ಸಂಪುಟ ೬. ಸಂಚಿಕೆ ೧ ಜೂನ್ ೧೯೬೩) ಮೊದಲ್ಗೊಂಡು "ಸಮಸ್ಯಾಪೂರಣ ಎಂಬೊಂದು ಅಂಕಣವನ್ನು ಪ್ರಾರಂಭಿಸಲಾಗಿದೆ. ಇದು ಕನ್ನಡಕ್ಕೆ ಅತಿಶಯುವೆನಿಸುವ ಛಂದೋಬದ್ಧ ಪದ್ಯರಚನೆಗೆ ಪ್ರೋತ್ಸಾಹ ನೀಡುವ ಉದ್ದೇಶವುಳ್ಳದ್ದಾಗಿದೆ. ಪ್ರತಿ ಸಂಚಿಕೆಯಲ್ಲಿಯೂ ಮುಂದಿನ ಸಂಚಿಕೆಗಾಗಿ ಸಮಸ್ಯಾ ಪದ್ಯವಾಕ್ಯವನ್ನು ಕೊಡಲಾಗುತ್ತದೆ. ಛಂದಃಸ್ವರೂಪವನ್ನರಿತು ಒಬ್ಬೊಬ್ಬರಿಂದ ರಚಿತವಾದ ಒಂದು ಪದ್ಯವನ್ನು ಮಾತ್ರ ಸ್ವೀಕರಿಸಲಾಗುತ್ತಿದೆ, ಈ ಸಂಚಿಕೆಗಾಗಿ ಒಂದು ಉತ್ಪಲಮಾಲಾ ವೃತ್ತಪಾದವನ್ನು ಕೊಡಲಾಗಿದೆ. ಅದು ಹೀಗಿದೆ :–" ಮುತ್ತಿದುವಲ್ತೆ ತುಂಬಿಗಳ ಗುಂಪುಗಳೊಮ್ಮೆಲೆ ಚಂದ್ರಬಿಂಬಮಂ".]

ಪ್ರಕಟನೆಗೆ ಬಂದಿರುವ ಸಮಸ್ಯಾಪೂರ್ತಿ ಪದ್ಯಗಳಿವು—

1. ಅಸ್ತಮಿಸೆಂದುಪಶ್ಚಿಮದ ರಂಗುಗಳೆಲ್ಲವು ಸೂರ್ಯಬಿಂಬಮಂ
ಸುತ್ತಿಡೆಯಿಂದೆ ಮುಚ್ಚುತಿರೆ ತಂಗದಿರೋತ್ತಮ ಕುತ್ತ ತಂದನೇ ?
ಮುತ್ತಲುಮಂದು ಜೇನ್ಕುಡಿಯಲುಂ ಕುಸುಮಂಗಳ ಮುತ್ತಲಂಪಲುಂ
ಮುತ್ತಿದುವಲ್ತೆ ದುಂಬಿಗಳ ಗುಂಪುಗಳೊಮ್ಮೆಲೆ ಚಂದ್ರ ಬಿಂಬಮಂ ||

ಎಸ್. ಎನ್. ಸಿಂಹ

2. ಕೃತಿಪಟಪ್ರಭು ಸ್ಫುರಿತ ಲೋಚನ ದೀಧಿತಿ ಕ ಾಲಕಾಲತಾ-
ವೃತ್ತಿ ಮನೋಜ್ಞ ಪತನಕ್ರಮದಿಂದೆ ಮುಸುಂಕಿದಂಬಿಕಾ-
ಚಿತ್ತಹರಾಸ್ಯಮಂ ಮುದದೆ ನೋಡಿ ಕವಿವ್ರಜ ಚಕ್ರಿಪೇಳಿದಂ
ಮುತ್ತಿದುವಲ್ತೆ ತುಂಬಿಗಳ ಗುಂಪುಗಳೊಮ್ಮೆಲೆ ಚಂದ್ರಬಿಂಬಮಂ ||

ಎಸ್. ಜಗನ್ನಾಥ

3. ಕತ್ತಲೆ ಮೆತ್ತಿದ ಘನ ನಿಶೀಥದ ಮೌನದಿ ಕುಳ್ಳಿರ್ಪಾ ಮದೋ-
ನ್ಮತ್ತೆಯ ಮುಂಗುರುಳ್ ಅಳಿಕುಳಾಳದ ನೋಹವ ಪುಟ್ಟಿಸಲ್ ಕಲಾ
ಸಕ್ತೆಯ ಭಾಸುರೋಜ್ವಲ ಮೊಗಂ ಪರಿಭಾವಿಸೆ ಚಂದ್ರನಂತಿರಲ್,
ಮುತ್ತಿದುವಲ್ತೆ ತುಂಬಿಗಳ ಗುಂಪುಗಳೊಮ್ಮೆಲೆ ಚಂದ್ರಬಿಂಬಮಂ ||

ಸನೋತನ ಹಳ್ಳಿ ರಾಮರಾಯ

4. ಒತ್ತರಿಸಿತ್ತು ಕತ್ತಲೆಯ ಹಮ್ಮು ದಿನೇಶನ ತೇಜಮುಟ್ಟಿರಲ್ ।
ತತ್ತರಿಸಿತ್ತು ಜೀವಜಡಜಾತಮೆ ಮುನ್ನಿರುಳೊಳ್ಮುಳುಂಗಿರಲ್ ॥
ಚಿತ್ರಮಹೋ! ಪ್ರಪೂರ್ಣಶಶಿಯಂಬುಜ ಮಾಯೆಯನೊಡ್ಡಿ
ಮೂಡಿರಲ್ ।
ಮುತ್ತಿದುವಲ್ತೆ ತುಂಬಿಗಳ ಗುಂಪುಗಳೊಮ್ಮೆಲೆ ಚಂದ್ರಬಿಂಬಮಂ ॥

ಎಸ್. ಆರ್.ಮಳಗಿ

5. ಚಿತ್ತವಿನೋದದಿಂದೆ ನವದಂಪತಿಗಳ್ ತಿಳಿನೀರ್ಗೊಳಕ್ಕೆ ಪಾ
ಯುತ್ತ ಮುದಂಬಡುತ್ತೆ ಜಲಕೇಳಿಯೊಡರ್ಚೆ ದಡಕ್ಕೆ ಬಂದರಾ
ಪೊತ್ತಳಕಾಳಿ ಮುಚ್ಚಿದವಳಾಸ್ಯವನೀಕ್ಷಿಸಿ ಪೇಳ್ದನೀ ತೆರ
ಮುತ್ತಿದುವಲ್ತೆ ತುಂಬಿಗಳ ಗುಂಪುಗಳೊಮ್ಮೆಲೆ ಚಂದ್ರ ಬಿಂಬಮಂ

6. ಮತ್ತದು ರಾಣಿಯೆಂದರಿತು ಮೆಲ್ಲನೆ ಪಿಕ್ಕುತೆ ಗಲ್ಲ ಕೇರಿಸಲ್
ಮೊತ್ತದೊಳಿರ್ದ ತುಂಬಿಗಳದೊರ್ಮೆಯೆ ಭೋಂಕನೆ ಪಾಯ್ದು ಸುತ್ತಲುಂ
ಮುತ್ತುತೆಯೊತ್ತಿನೊಳ್ ಮುಖಮನಾವರಿಸಲ್ಕದ ಕೆಂದನೊರ್ವನೇಂ
ಮುತ್ತಿದುವಲ್ತೆ ತುಂಬಿಗಳ ಗುಂಪುಗಳೊರ್ಮೆಲೆ ಚಂದ್ರಬಿಂಬಮಂ ॥

ವಿದ್ವಾನ್, ಟಿ. ಕೇಶವ ಭಟ್ಟ

ಲೋಚನದ ಮುಂದಿನ ಸಂಚಿಕೆಗೆ ಸಮಸ್ಯೆ :

" ತರಳೆಯರು ತುಂಬಿದರು ಮರಿದುಂಬಿಗ ಡೊಂಬಿನಲಿ "

# ಸರಸ್ವತೀ ಮತ್ತು ದೃಷದ್ವತೀ

---

— ಸೇಡಿಯಾಪು ಕೃಷ್ಣ ಭಟ್ಟ

ಈ ಎರಡು ಹೆಸರುಗಳನ್ನು ಕುರಿತು 'ತಥ್ಯದರ್ಶನ'ವೆಂಬ ನನ್ನ ಪುಸ್ತಕ ಪ್ರಥಮ ಪರಿಚ್ಛೇದದಲ್ಲಿ (೭ನೇ ಪುಟ) ಕೆಲವು ಮಾತುಗಳನ್ನು ಬರೆಯಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದ ಕೆಲವು ಹೆಚ್ಚಿನ ವಿಚಾರಗಳನ್ನು ಈ ಲೇಖನದಲ್ಲಿ ನಿರೂಪಿಸಲು ಉದ್ದೇಶಿಸಲಾಗಿದೆ. ಇವು ಎರಡು ನದಿಗಳ ಹೆಸರುಗಳಾಗಿದ್ದು, ಬ್ರಹ್ಮಾವರ್ತವೆಂಬ ಪ್ರದೇಶದ ಮೇರೆಗಳೆಂದು ಸಹ ಅಲ್ಲಿ ನಿರೂಪಿತವಾಗಿದೆ. ಆದರೆ ಈ ಎರಡು ಹೊಳೆಗಳೂ ಈಗ ಬತ್ತಿಹೋಗಿರುವುದರಿಂದ, ಅವು ಹರಿಯುತ್ತಿದ್ದ ಪ್ರದೇಶವು ಯಾವುದಾಗಿತ್ತೆಂದು ನಿರ್ಣಯಿಸುವುದು ಅಸಾಧ್ಯವೆಂದೇ ಹೇಳಬಹುದಾದಷ್ಟು ದುರೂಹ್ಯವಾಗಿದೆ. ಈ ಸಮಸ್ಯೆಯನ್ನು ಆರ್ಯಸಮಾಜದವರಿಂದ ಪ್ರಕಟವಾದ ಒಂದು ಪುಸ್ತಕದಲ್ಲಿ (ಪುಸ್ತಕದ ಹೆಸರು ನೆನಪಿಲ್ಲ) ಬಹು ಲಘುವಾಗಿ ಪರಿಹರಿಸುವ ಪ್ರಯತ್ನವನ್ನು ಮಾಡಲಾಗಿದೆ. ಅದರಲ್ಲಿ ಸರಸ್ವತೀ ಮತ್ತು ದೃಷದ್ವತೀ ಎಂಬ ಎರಡು ಹೊಳೆಗಳು ಆರ್ಯಾವರ್ತದ ಪಶ್ಚಿಮದ ಮತ್ತು ಪೂರ್ವದ ಮೇರೆಗಳಾಗಿದ್ದುವೆಂದೂ, ಅವುಗಳೇ ಸಿಂಧು ಮತ್ತು ಬ್ರಹ್ಮಪುತ್ರ ನದಿಗಳೆಂದೂ, ಆರ್ಯಾವರ್ತವೆಂದರೂ ಬ್ರಹ್ಮಾವರ್ತವೆಂದರೂ ಒಂದೇ ಭೂಭಾಗದ ಹೆಸರೆಂದೂ ಹೇಳಲಾಗಿದೆ. ಆದರೆ ಪ್ರಸ್ತುತ ಪುಸ್ತಕದಲ್ಲಿ ಉದ್ಧರಿಸಲ್ಪಟ್ಟ ಮನುಸ್ಮೃತಿಯ ವಾಕ್ಯದಲ್ಲಿ (ನೋಡಿ ಪುಟ ೭) ಆರ್ಯಾವರ್ತದ ಪೂರ್ವಪಶ್ಚಿಮ ಮೇರೆಗಳು ಪೂರ್ವ ಪಶ್ಚಿಮ ಸಮುದ್ರಗಳೇ ಆಗಿದ್ದುವೆಂದೂ ದಕ್ಷಿಣೋತ್ತರ ಮೇರೆಗಳು ವಿಂಧ್ಯ ಮತ್ತು ಹಿಮಾಲಯ ಪರ್ವತಗಳೆಂದೂ ಸ್ಪಷ್ಟವಾಗಿ ಉಕ್ತವಾಗಿದೆ. ಇದೂ ಅಲ್ಲದೆ, ಸರಸ್ವತೀ ದೃಷದ್ವತೀ ಎಂಬ ಎರಡು ನದಿಗಳ ಮಧ್ಯಭಾಗಕ್ಕೆ ಬ್ರಹ್ಮಾವರ್ತವೆಂಬ ಹೆಸರೆಂದು ಸಹ ಹೇಳಲಾಗಿದೆ. ಈ ಕಾರಣಗಳಿಂದ, ಆರ್ಯಸಮಾಜೀಯರ ಪುಸ್ತಕದಲ್ಲಿ ಉಕ್ತವಾಗಿರುವಂತೆ, ಆರ್ಯಾವತವೆಂದರೂ ಬ್ರಹ್ಮಾವರ್ತವೆಂದರೂ ಒಂದೇ ಭೂಭಾಗದ ಎರಡು ಹೆಸರುಗಳೆಂಬ, ಮತ್ತು ಸರಸ್ವತೀ ಎಂಬುದು ಸಿಂಧುನದಿಯ ಹಾಗೂ ದೃಷದ್ವತೀ ಎಂಬುದು ಬ್ರಹ್ಮಪುತ್ರನದಿಯ ಹೆಸರೆಂಬ ಮಾತುಗಳು ವಿಶ್ವಾಸಾರ್ಹವಲ್ಲವೆಂಬುದು ತಿಳಿಯದಿರದು.

ಇದೂ ಅಲ್ಲದೆ ಸಿಂಧು ಮತ್ತು ಬ್ರಹ್ಮಪುತ್ರ ಎಂಬ ಹೆಸರುಗಳು ಸಂಸ್ಕೃತದಲ್ಲಿ ಪುಲ್ಲಿಂಗರೂಪದವುಗಳಾಗಿವೆ. ಸರಸ್ವತೀ ದೃಷದ್ವತೀ ಎಂಬವುಗಳಾದರೋ ಸ್ತ್ರೀವಾಚಕಗಳಾಗಿವೆ. ಸಾಮಾನ್ಯವಾಗಿ ಎಲ್ಲಾ ನದಿಗಳ ಹೆಸರುಗಳೂ ಸಂಸ್ಕೃತದಲ್ಲಿ ಸ್ತ್ರೀಲಿಂಗ

ಶಬ್ದಗಳೇ ಆಗಿರುತ್ತವೆ. ಅಪವಾದರೂಪವಾಗಿ ಮಾತ್ರ ಕೆಲವೇ ಕೆಲವು ನದಿಗಳಿಗೆ ಪುಲ್ಲಿಂಗವು ಅನ್ವಯಿಸುವುದಾಗಿದೆ. ಪುಲ್ಲಿಂಗರೂಪವಾದ ಹೆಸರುಳ್ಳ ನದಿಗಳನ್ನು ಸಂಸ್ಕೃತದಲ್ಲಿ ನದಿಗಳೆಂದು ಕರೆಯದೆ 'ನದ'ಗಳೆಂದು ಹೆಸರಿಸುತ್ತಾರೆ. ಹೀಗಿರುವುದರಿಂದ 'ಸಿಂಧು' ಮತ್ತು 'ಬ್ರಹ್ಮಪುತ್ರ' ಎಂಬವು ನದಗಳೇ ಹೊರತು ನದಿಗಳಲ್ಲ. ಆದಕಾರಣ ಸರಸ್ವತೀ ದೃಷದ್ವತೀ ಎಂಬ ಹೆಸರುಗಳಿಗೆ ಸಿಂಧು ನದವೂ ಬ್ರಹ್ಮಪುತ್ರ ನದವೂ ಪರ್ಯಾಯ ಶಬ್ದಗಳಾಗಲಾರವೆಂಬುದು ಸ್ಪಷ್ಟವೇ ಸರಿ[1].

ಆದರೆ ಸರಸ್ವತೀ ದೃಷದ್ವತೀ ಎಂಬೆರಡು ನದಿಗಳು ಈಗ ಕೇವಲ ನಾಮಮಾತ್ರ ಉಳಿದಿವೆ ಹೊರತು ದೃಷ್ಟಿಗೋಚರವಾಗುವುದಿಲ್ಲ. ಆ ಎರಡು ನದಿಗಳೂ ಈಗ ಬತ್ತಿ ಹೋಗಿವೆಯೆಂದು ಪರಂಪರಾಗತವಾಗಿ ಹೇಳುವುದು ಕೇಳಿಬರುತ್ತಿದೆ. ಅವುಗಳಲ್ಲೊಂದಾದ ಸರಸ್ವತೀ ಎಂಬ ಹೊಳೆಯು ಪ್ರಯಾಗದಲ್ಲಿ ಗಂಗಾಯಮುನಾ ಸಂಗಮದೊಡನೆ ಒಂದು ಕಾಲದಲ್ಲಿ ಬಂದು ಸೇರುತ್ತಿತ್ತು ಎಂದೂ ಬಹುಪುರಾತನ ಕಾಲದಿಂದಲೂ ಪ್ರಸಿದ್ಧವಾಗಿದೆ. ಗಂಗಾ ಯಮುನಾ ಸಂಗಮವನ್ನು ಇಂದು ಕೂಡ 'ತ್ರಿವೇಣೀ ಸಂಗಮ'ವೆಂದೇ

---

1. ಭಾರತಭೂಮಿಗೆ 'ಹಿಂದುಸ್ಥಾನ'ವೆಂಬ ಹೆಸರನ್ನು ತಂದುಕೊಟ್ಟುದು 'ಸಿಂಧು ನದ'ವೇ ಆಗಿದೆಯೆಂಬುದು ಸರ್ವಮಾನ್ಯವಾದ ಅಭಿಪ್ರಾಯವಾಗಿದೆ. ಹೀಗಿರುವುದರಿಂದ ಆ ನದಿಗೆ 'ಸಿಂಧು'ವೆಂಬ ಹೆಸರು ಅತಿ ಪುರಾತನ ಕಾಲದಲ್ಲಿಯೇ ಇತ್ತೆಂದು ತಿಳಿಯುವುದು ಯುಕ್ತವೇ ಸರಿ. ಮತ್ತು ನಿರುಕ್ತಕಾರನಾದ ಯಾಸ್ಕನ ಕಾಲದಲ್ಲಿಯೂ (ಕ್ರಿ. ಪೂ. ೭ನೇ ಶತಮಾನ) ಆ ನದಿಗೆ ಸುಪ್ರಸಿದ್ಧವಾದ ಹೆಸರು 'ಸಿಂಧು' ಎಂಬುದೇ ಆಗಿತ್ತೆಂಬುದು, 'ಸುಷೋಮಾ' ಎಂಬ ವೇದೋಕ್ತವಾದ ಆ ನದೀನಾಮಕ್ಕೆ 'ಸಿಂಧು' ಎಂಬ ಅರ್ಥವನ್ನು ಅವನು ಕೊಡಬೇಕಾಗಿ ಬಂದುದರಿಂದ ಇದು ಇನ್ನಷ್ಟು ಸುಸ್ಪಷ್ಟವಾಗುತ್ತದೆ. ಇದರಿಂದ, ಸುಷೋಮಾ ಎಂಬ ಸ್ತ್ರೀವಾಚಕವಾದ ಹೆಸರು ಆ ನದಿಗೆ ಇದ್ದ ಕಾರಣ ಸರಸ್ವತೀ ಎಂಬ ಸ್ತ್ರೀವಾಚಕವಾದ ಹೆಸರು ಸಿಂಧುವೆಂಬ ಪುಲ್ಲಿಂಗವಾಚಕವಾದ ಹೆಸರಿಗೆ ಪರ್ಯಾಯ ಶಬ್ದವಾಗಿದ್ದಿರಬಹುದೋ ಎಂಬೊಂದು ಶಂಕೆಯು ಕೆಲವರಲ್ಲಿ ಹುಟ್ಟಬಹುದಾಗಿರುವುದಾದರೂ, ಸುಷೋಮಾ ಎಂಬ ಶಬ್ದದ ಅರ್ಥಕ್ಕೂ ಸರಸ್ವತೀ ಎಂಬ ಶಬ್ದದ ಅರ್ಥಕ್ಕೂ ಯಾವ ಸಾಮ್ಯವೂ ಇರುವುದಿಲ್ಲವೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳುವುದು ಅವಶ್ಯವಾಗಿದೆ. (ಸಿಂಧುನದವು ಭಾರತಭೂಮಿಯಲ್ಲಿ ಹರಿಯುವ ನದಿಗಳೊಳಗೆಲ್ಲ ಅತಿ ದೊಡ್ಡದಾಗಿದೆ- ಸುಷೋಮಾ ಎಂಬ ಶಬ್ದಕ್ಕೆ ಹಲವು ಹೊಳೆಗಳು ಬಂದು ಸೇರುವ, ಮಹಾಪ್ರವಾಹವಾಗಿರುವ ಹೊಳೆಯೆಂಬುದು ಅರ್ಥವಾಗಿದೆ ; ಮತ್ತು 'ಸಿಂಧು' ಎಂಬ ಶಬ್ದಕ್ಕೆ ಸಮುದ್ರವೆಂಬ ಅರ್ಥವೇ ಪ್ರಸಿದ್ಧವಾಗಿ ಇರುವುದರಿಂದ – ಸಮುದ್ರ ಎಂಬರ್ಥವನ್ನು ಕೊಡುವ ಶಬ್ದಗಳೆಲ್ಲವೂ ಪುಲ್ಲಿಂಗವಾಚಕಗಳೇ ಆಗಿವೆ – ಅದು ಸಮುದ್ರತುಲ್ಯವಾಗಿದೆ ಎಂಬ ಕಾರಣದಿಂದಲೇ ಸಿಂಧುವೆಂಬ ಹೆಸರು ಅದಕ್ಕೆ ರೂಢವಾಯಿತೆಂದು ಭಾವಿಸಬಹುದಾಗಿದೆ.) ಬ್ರಹ್ಮಪುತ್ರ ನದಕ್ಕಾದರೋ ಸ್ತ್ರೀವಾಚಕವಾದ ಪರ್ಯಾಯ ನಾಮವಾವುದೂ ಇಲ್ಲದಿರುವುದರಿಂದ 'ದೃಷದ್ವತೀ' ಎಂಬ ಸ್ತ್ರೀವಾಚಕನಾಮಕ್ಕೆ 'ಬ್ರಹ್ಮಪುತ್ರ' ಎಂಬುದು ಪರ್ಯಾಯನಾಮವಾಗುವ ಸಂಭವವೇ ಇರುವುದಿಲ್ಲ. ಈ ಕಾರಣಗಳಿಂದ, ಆರ್ಯಸಮಾಜೀಯರ ಅಭಿಪ್ರಾಯಕ್ಕೆ ಯಾವ ಆಧಾರವೂ ಇಲ್ಲದಾಗಿದೆ.

ಕರೆಯುತ್ತಾರೆ. ಆದರೆ ಅಲ್ಲಿ ನಮಗೆ ಕಾಣುವುದು ಗಂಗೆ ಮತ್ತು ಯಮುನೆ ಎಂಬ ಎರಡು ನದಿಗಳ ಸಂಗಮವು ಮಾತ್ರ ಆಗಿರುತ್ತದೆ. ಇದರಿಂದ ಒಂದಾನೊಂದು ಕಾಲದಲ್ಲಿ ಅಲ್ಲಿಗೆ ಬಂದು ಸೇರುತ್ತಿದ್ದ ಸರಸ್ವತೀ ನದಿಯು ಬತ್ತಿಹೋಗಿ ಎಷ್ಟೆಷ್ಟೋ ಕಾಲವಾಯಿತೆಂಬ ಅಭಿಪ್ರಾಯವು ಸ್ಥಿರವಾಗುತ್ತದೆ. ಹೀಗೆ ಅವು ಬತ್ತಿಹೋದುದಕ್ಕೆ ಪರಂಪರಾಗತವಾದ ಹೇಳಿಕೆ ಹೊರತು ಬೇರೆ ಆಧಾರವೇನಾದರೂ ಇದೆಯೋ ? ಎಂಬುದನ್ನು ಪರೀಕ್ಷಿಸೋಣ.

ನನ್ನ ಅಲ್ಪಮತಿಗೆ ಹೊಳೆಯುವಂತೆ, ಆ ಎರಡು ಹೆಸರುಗಳೇ ಅವು ಬತ್ತಿಹೋಗುವ ಲಕ್ಷಣಗಳುಳ್ಳ ನದಿಗಳೆಂಬುದನ್ನು ಸೂಚಿಸುವ ಹಾಗೆ ಕಾಣುತ್ತಿವೆ. ಸರಸ್ವತೀ ಎಂಬ ಶಬ್ದದ ಅರ್ಥವೇನೆಂಬುದನ್ನು ಚಿಂತಿಸಿದರೆ, 'ಸರಸ್ಸುಗಳಿಂದ ತುಂಬಿದ 'ಹೊಳೆ' ಎಂಬರ್ಥವು ಗೋಚರವಾಗುತ್ತದೆ. ಯಾವುದಾದರೂ ಒಂದು ಹೊಳೆಯು ಸರಸ್ಸುಗಳಿಂದ ತುಂಬಿರುವುದೆಂದಾದರೆ ಅದರ ಪ್ರವಾಹವು ಏಕರೂಪವಾಗಿರದೆ ಅಲ್ಲಲ್ಲಿ ಕೊಳಗಳ ರೂಪದಲ್ಲಿ ಇದ್ದು ಒಂದು ಕೊಳದಿಂದ ಇನ್ನೊಂದು ಕೊಳಕ್ಕೆ ಪ್ರವಹಿಸುವ ರೂಪವುಳ್ಳದ್ದಾಗಿ ಇರಬೇಕಾಗುತ್ತದೆ. ಮಳೆಗಾಲದಲ್ಲಿ ಮಾತ್ರ ಅಂತಹ ಹೊಳೆಯು ತುಂಬಿ ಹರಿದು ಏಕರೂಪವಾದ ಪ್ರವಾಹವಾಗಿ ಹರಿಯುತ್ತಿದ್ದು, ತದನಂತರ ಪ್ರವಾಹವು ಕ್ಷೀಣಿಸುವಾಗ ಅದರ ತಗ್ಗಾದ ಸ್ಥಳಗಳಲ್ಲಿ ಮಾತ್ರ ನೀರು ಅಧಿಕವಾಗಿರಬೇಕಾಗುತ್ತದೆ. ಸರಸ್ವತೀ ನದಿಯು ಇಂತಹದೊಂದು ನದಿಯಾಗಿತ್ತೆಂದು ತಿಳಿದುಕೊಂಡಾಗ, ಆ ಹೆಸರು ಅದಕ್ಕೆ ಕೊಡಲ್ಪಟ್ಟ ಕಾಲದಲ್ಲಿಯೇ, ಕಾಲಾಂತರದಲ್ಲಿ ಅದು ಬತ್ತಿಹೋಗಬಹುದಾದ ನದಿಯಾಗಿತ್ತೆಂಬುದು ಭಾಸವಾಗದಿರದು ; ಮತ್ತು ಆಹೆಸರಿನ ಔಚಿತ್ಯವು ತಿಳಿದು ಬಾರದಿರದು. ಆದ ಕಾರಣ ಪ್ರಯಾಗದ ವರೆಗೆ ಹರಿದು ಬಂದು ತ್ರಿವೇಣೀ ಸಂಗಮವೆಂಬ ಹೆಸರಿಗೆ ಕಾರಣಭೂತವಾದ ಸರಸ್ವತೀ ನದಿಯು ಬತ್ತುತ್ತಾ ಬಂದು ಮತ್ತೆ ಸಂಪೂರ್ಣವಾಗಿ ಬತ್ತಿಹೋಗಿ ಈಗ ಆ ನದೀಪಾತ್ರವು ಸಹ ಗೋಚರವಾಗುವುದಿಲ್ಲವೆಂದು ತಿಳಿಯುವುದು ಯುಕ್ತಿಯುಕ್ತವಾಗಿದೆ ಎಂದು ನನಗೆ ತೋರುತ್ತದೆ.

ಇನ್ನು ದೃಷದ್ವತೀ ಎಂಬ ನದೀನಾಮದ ವಿಚಾರ ಮಾಡೋಣ. 'ದೃಷತ್' ಎಂದರೆ ಕಲ್ಲುಬಂಡೆ ಎಂದರ್ಥ. ಈ ಅರ್ಥವನ್ನು ದೃಷದ್ವತೀ ಎಂಬ ನದಿಯ ಹೆಸರಿಗೆ ಅನ್ವಯಿಸಿದರೆ, ಅದು 'ಕಲ್ಲುಬಂಡೆಗಳಿಂದ ತುಂಬಿದ ಹೊಳೆ'ಯಾಗಿತ್ತೆಂಬ ತಥ್ಯವು ಗೋಚರವಾಗುತ್ತದೆ. ಸಾಮಾನ್ಯವಾಗಿ ನದಿಗಳಲ್ಲೆಲ್ಲ ಅಲ್ಲಲ್ಲಿ ಕಲ್ಲುಬಂಡೆಗಳು ಇರುವುದು ಸ್ವಾಭಾವಿಕ. ಹೀಗಿರುವಾಗ ವಿಶಿಷ್ಟವಾಗಿ ದೃಷದ್ವತೀ (ಕಲ್ಲುಬಂಡೆಗಳಿಂದ ತುಂಬಿದ ಹೊಳೆ) ಎಂಬ ಹೆಸರು ಆ ನದಿಗೆ ಕೊಡಲ್ಪಡಲು ಕಾರಣವೇನಿದ್ದಿರಬಹುದೆಂದು ಚಿಂತಿಸಿದರೆ ನೀರು ಪ್ರವಹಿಸುತ್ತಿರುವಾಗಲೂ ಆ ನದಿಯಲ್ಲಿ ಕಲ್ಲುಬಂಡೆಗಳು ಮೇಲೆದ್ದು ಕಾಣಿಸುತ್ತಿದ್ದವೆಂಬುವರಿಂದ ಆ ಹೆಸರು ಹುಟ್ಟಿತೆಂದು ಗೋಚರವಾಗದಿರದು. ಹೀಗೆ ಬಂಡೆಗಳೇ ಒಂದು ಹೊಳೆಯಲ್ಲಿ ಕಂಡು ಬರುತ್ತಿರುವುದಾದರೆ ಆ ಹೊಳೆ ಮಳೆಗಾಲದಲ್ಲಿ

ಮಾತ್ರ ತುಂಬಿ ಹರಿಯುತ್ತಿದ್ದು, ಮತ್ತೆ ಬಂಡೆಗಳೆಡೆಯಲ್ಲಿ ಕ್ಷೀಣಪ್ರವಾಹವಾಗಿಯೇ ಹರಿಯುತ್ತಿರಬೇಕಾಗುತ್ತದೆ. ಆದುದರಿಂದ ದೃಷದ್ವತೀ ನದಿಯು ಸಹ ಆ ಹೆಸರು ಹುಟ್ಟುವಾಗಲೇ ಬತ್ತಿಹೋಗುವ ಲಕ್ಷಣಗಳಿದ್ದ ನದಿಯಾಗಿದ್ದಿರಬಹುದೆಂಬುದ ಹೊಳೆಯದಿರದು. ಸರಸ್ವತೀ ನದಿಯ ತೀರದಲ್ಲಿ ವಾಸಿಸುತ್ತಿದ್ದ ಎಷ್ಟೋ ಬ್ರಾಹ್ಮಣ ಕುಟುಂಬಗಳು ಕಾಲಾಂತರದಲ್ಲಿ ಅಲ್ಲಿಂದ ನಿರ್ಗಮಿಸಿ ಉತ್ತರದ ಕಾಶ್ಮೀರದಲ್ಲಿ ಮತ್ತು ಪೂರ್ವದ ಗೌಡದೇಶದಲ್ಲಿ ನೆಲೆನಿಂತರೂ ತಮ್ಮ ವಂಶದ ಹೆಸರನ್ನು 'ಸಾರಸ್ವತ'ರೆಂದೇ ಇಂದಿಗೂ ಬಳಸುತ್ತಿರುವರು.[2] ಆದರೆ ದೃಷದ್ವತೀ ಎಂಬುದು ಯಾವ ವಂಶದ ಹೆಸರಿಗೂ ಕಾರಣಭೂತವಾಗಿರುವುದು ನನಗೆ ತಿಳಿದು ಬಂದಿಲ್ಲ. ಇದರಿಂದ, ಸರಸ್ವತೀ ನದಿಯು ಬತ್ತಿಹೋಗುವುದಕ್ಕೆ ಮೊದಲೇ ದೃಷದ್ವತೀ ನದಿಯು ಬತ್ತಿಹೋಗಿತ್ತೆಂಬ ಊಹೆ ಹುಟ್ಟುವಂತಿದೆ. ಆದರೆ ದೃಷದ್ವತೀ ನದಿಯು ಸರಸ್ವತೀ ನದಿಯ ಉಪನದಿ ಯಾಗಿತ್ತೆಂದು ನಿಘಂಟುಗಳಿಂದ (ನೋಡಿ : ಆಪಟೆಯವರ ಶಬ್ದಕೋಶ) ತಿಳಿದು ಬರುವ ಕಾರಣ ಅದಕ್ಕೆ ಪ್ರಾಧಾನ್ಯವಿಲ್ಲದೆ ಮುಂದೆ ಆ ಹೊಳೆಗೆ ಸರಸ್ವತೀ ಎಂಬ ಹೆಸರು ಮಾತ್ರ ರೂಢವಾಗಿದ್ದಿರಲೂಬಹುದೆಂದು ಭಾವಿಸಬಹುದಾಗಿದೆ. ಇದಕ್ಕೆ ನಮ್ಮ ದೇಶದ ಬೇರೆ ಹೊಳೆಗಳ ಹೆಸರುಗಳೂ ಸಾಕ್ಷಿಗಳಾಗಿವೆ. ಉದಾ : ಯಮುನಾ ನದಿ ಒಂದು ಮಹಾನದಿಯಾಗಿದ್ದರೂ ಗಂಗೆಯೊಡನೆ ಸಂಗಮಿಸಿದ ಮೇಲೆ ಆ ಹೆಸರು ಕೇಳಿಬಾರದೆ, ಮುಂದೆ ಅದು ಗಂಗೆ ಎಂದೇ ಕರೆಯಲ್ಪಡುತ್ತದೆ. ನಮ್ಮ ಕರ್ನಾಟಕದ ತುಂಗಭದ್ರಾ ನದಿಯು ಸಣ್ಣದೊಂದು ನದಿಯೇನೂ ಆಗಿಲ್ಲವಾದರೂ ಕೃಷ್ಣಾನದಿಗೆ ಅದು ಸೇರಿಕೊಂಡ ಮೇಲೆ ತುಂಗಭದ್ರೆಯೆಂಬ ಹೆಸರು ಅಳಿದುಹೋಗಿ ಕೃಷ್ಣಾನದಿ ಯೆಂದೇ ಕರೆಯಲ್ಪಟ್ಟು ಮುಂದುವರಿಯುತ್ತದೆ. ಇವುಗಳಂತೆಯೇ ದೃಷದ್ವತೀ ನದಿಯು ಸರಸ್ವತೀ ನದಿಯೊಡನೆ ಸಂಗಮಿಸಿದ ಮೇಲೆ ದೃಷದ್ವತೀ ಎಂಬ ಹೆಸರು ಅಳಿದು ಹೋಗಿ ಸರಸ್ವತೀ ಎಂಬ ಹೆಸರು ಮಾತ್ರ ಪ್ರಯಾಗದ ವರೆಗೆ ಉಳಿದಿರಬಹುದು. ಈ ಕಾರಣದಿಂದ ಸಾರಸ್ವತರೆಂಬವರು ಸರಸ್ವತೀ–ದೃಷದ್ವತೀ ನದಿಗಳ ಮಧ್ಯದ ಪ್ರದೇಶವಾದ ಬ್ರಹ್ಮಾವರ್ತದಲ್ಲಿಯೇ ಇದ್ದವರೆಂದು ಹೇಳುವುದಕ್ಕಾಗುವುದಿಲ್ಲ; ಅವರು

---

2. ಇನ್ನು ಕೆಲವರು ವಿಂಧ್ಯ ಪರ್ವತಶ್ರೇಣಿಯ ಸಮೀಪದಲ್ಲಿರುವ ಕುಶಸ್ಥಲವೆಂಬ ಪ್ರದೇಶದಲ್ಲಿ ನೆಲಸಿದರೆಂದು ತೋರುತ್ತದೆ. ಈ ನನ್ನ ಊಹೆಗೆ ಕಾರಣವೇನೆಂದರೆ–ಗೋವೆಗೆ ವಲಸೆ ಬಂದು ನೆಲಸಿ ತಮ್ಮನ್ನು ಸಾರಸ್ವತರೆಂದೇ ಹೆಸರಿಸಿಕೊಳ್ಳುವ ಒಂದು ಬ್ರಾಹ್ಮಣ ವರ್ಗಕ್ಕೆ 'ಕುಶಸ್ಥಳಿ'ಗಳೆಂಬ ಹೆಸರಿದೆ. ಗೌಡದೇಶದಿಂದ ಗೋವೆಗೆ ಬಂದು ನೆಲಸಿದ ಬ್ರಾಹ್ಮಣ ವರ್ಗವನ್ನೂ ಕುಶಸ್ಥಳದಿಂದ ಬಂದು ನೆಲಸಿದ ಬ್ರಾಹ್ಮಣ ವರ್ಗವನ್ನೂ ಬೇರೆ ಬೇರಾಗಿ ತಿಳಿದುಕೊಳ್ಳಬೇಕಾದಾಗ ಗೌಡಸಾರಸ್ವತ ಮತ್ತು ಕುಶಸ್ಥಳಿಸಾರಸ್ವತ ಎಂಬ ನಾಮಭೇದಗಳು ಆಯಾವರ್ಗಕ್ಕೆ (ಈಶತಮಾನದ ಆದಿಯ ವರೆಗೆ) ರೂಢವಾಗಿದ್ದವು. ನಾವೀಗ ಸಾಮಾನ್ಯವಾಗಿ'ಸಾರಸ್ವತ'ರೆಂದು ಹೆಸರಿಸುವ ಬ್ರಾಹ್ಮಣ ವರ್ಗವನ್ನು, ನಮ್ಮಜ್ಜ ಕುಶಸ್ಥಳಿ ಗಳೆಂದೇ ಹೆಸರಿಸುತ್ತಿದ್ದರು.

ಆ ಸಂಗಮದಿಂದ ಮುಂದಿನ ಭಾಗವಾದ ಸರಸ್ವತೀ ತೀರದಲ್ಲಿ ನೆಲಸಿದವರಾಗಿದ್ದಿರಲೂ ಬಹುದೆಂದು ಹೇಳಬೇಕಾಗುತ್ತದೆ.

ಬ್ರಹ್ಮಾವರ್ತದ ಮೇರೆಗಳೆನಿಸಿಕೊಂಡಿರುವ ಸರಸ್ವತೀ ದೃಷದ್ವತೀ ನದಿಗಳು ಎಲ್ಲಿ ಹುಟ್ಟಿ ಯಾವ ದಿಕ್ಕಿಗೆ ಹರಿದುಹೋಗುತ್ತಿದ್ದವೆಂಬುದು ಯಾವ ಪುರಾತನ ಗ್ರಂಥದಲ್ಲಿಯೂ ಉಕ್ತವಾದಂತೆ ತೋರುವುದಿಲ್ಲ. ಆ ನದಿಗಳು ಬತ್ತಿಹೋಗಿರುವುದಕ್ಕೆ ಕಾರಣವೇನೆಂಬುದು ಸಹ ಎಲ್ಲಿಯೂ ಹೇಳಲ್ಪಟ್ಟಂತಿಲ್ಲ. ಹಿಮಾಲಯದಲ್ಲಿ ಹುಟ್ಟಿ ಆರ್ಯಾವರ್ತದಲ್ಲೆಲ್ಲ ಹರಿಯುತ್ತಿರುವ ನೂರಾರು ಹೊಳೆಗಳಲ್ಲಿ ಒಂದೂ ಕೂಡ ಬತ್ತಿಹೋದಂತೆ ತೋರುವುದಿಲ್ಲ. ಏಕೆಂದರೆ ಬೇಸಗೆಯಲ್ಲಿ ಕರಗಿದ ಹಿಮವು ಆ ನದಿಗಳಲ್ಲಿ ಪ್ರವಹಿಸುತ್ತಿರುವುದರಿಂದ ಅವು ಯಾವಾಗಲೂ ಜಲಸಂಪನ್ನವಾಗಿಯೇ ಇರುತ್ತವೆ. ಇದನ್ನು ಪರಿಭಾವಿಸಿದಾಗ ಸರಸ್ವತೀ ದೃಷದ್ವತೀ ಎಂಬ ನದಿಗಳು ಹಿಮಾಲಯದಿಂದ ಹರಿದು ಬರುವ ನದಿಗಳಾಗಿರುತ್ತಿದ್ದರೆ ಅವು ಬತ್ತಿ ಹೋಗಲು ಕಾರಣವಿರಲಿಲ್ಲವೆಂದು ಹೊಳೆಯುತ್ತದೆ.

ಹಾಗಾದರೆ ಈ ಎರಡು ಹೊಳೆಗಳ ಜನ್ಮಸ್ಥಾನವು ಯಾವುದಾಗಿದ್ದಿರಬಹುದು ? ಉತ್ತರ ಭಾರತದಲ್ಲಿ ಇರುವ ಬೇರೊಂದು ಪರ್ವತಶ್ರೇಣಿಯೆಂದರೆ 'ಆರಾವಲೀ' ಪರ್ವತವೇ ಆಗಿದೆ ಹೊರತು ಬೇರೆ ಯಾವುದೂ ಇರುವುದಿಲ್ಲ. ಹೀಗಿರುವುದರಿಂದ ಸರಸ್ವತೀ ದೃಷದ್ವತೀ ನದಿಗಳು 'ಆರಾವಲೀ' ಶ್ರೇಣಿಯಲ್ಲಿ ಹುಟ್ಟಿದವುಗಳಾಗಿದ್ದುವೆಂದು, ಮುಂದೆ ಅವೆರಡು ಸಂಗಮಿಸಿದ ಮೇಲೆ ಒಂದೇ ನದಿಯಾಗಿ ಪರಿಣಮಿಸಿ ಯಮುನಾ ನದಿಯ ದಕ್ಷಿಣ ತಟದಿಂದ ಸಾಕಷ್ಟು ದೂರದಲ್ಲಿ ಪೂರ್ವಾಭಿಮುಖವಾಗಿಯೇ ಹರಿದು ಪ್ರಯಾಗದಲ್ಲಿ ಯಮುನೆಯನ್ನು ಸೇರಿಕೊಂಡವೆಂದು ಊಹಿಸುವುದು ಯುಕ್ತಿಯುಕ್ತವಾಗಿ ತೋರುತ್ತದೆ.

ಆರಾವಲೀ ಪರ್ವತಶ್ರೇಣಿಯ ಪೂರ್ವೋತ್ತರ ಪ್ರದೇಶವೆಲ್ಲ ಇಂದು ಮರುಭೂಮಿಯೇ ಆಗಿದೆಯೆಂದರೆ ತಪ್ಪಾಗಲಾರದು. ಅತಿ ಪುರಾತನ ಕಾಲದಿಂದಲೇ ಆ ಪ್ರದೇಶವು ಮರುಭೂಮಿಯಾಗಿತ್ತೆಂದು ತೋರುವುದಿಲ್ಲ. ಏಕೆಂದರೆ ಆ ಮರಳು ಪ್ರದೇಶವು ಇಂದು ಕೂಡ ಉತ್ತರಕ್ಕೋ ಪೂರ್ವಕ್ಕೋ ವಿಸ್ತರಿಸುತ್ತಲೇ ಇರುವುದು ಗೋಚರವಾಗುತ್ತದೆ. ಆದುದರಿಂದ ಅಜ್ಞಾತಕಾಲದಲ್ಲಿ ಆರಾವಲೀ ಪರ್ವತಶ್ರೇಣಿಯ ಸಮೀಪದ ಪ್ರದೇಶವೆಲ್ಲ ಉತ್ತರಭಾರತದ ಇತರ ಭಾಗಗಳಂತೆಯೇ ಜಲಸಂಪನ್ನವಾಗಿತ್ತೆಂದೂ, ಆ ಕಾಲದಲ್ಲಿ ಅಲ್ಲಿ ಸಾಕಷ್ಟು ಮಳೆ ಬೀಳುತ್ತಿದ್ದು ಹಲವು ನದಿಗಳು ಆ ಪರ್ವತ ಶ್ರೇಣಿಯಲ್ಲಿ ಹುಟ್ಟಿ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಹರಿದುಸರಸ್ವತೀ ನದಿಯಲ್ಲಿ ಸಂಗಮಿಸುತ್ತಿದ್ದುವೆಂದೂ ಭಾವಿಸುವುದು ತಪ್ಪಾಗಲಾರದೆಂದು ನನಗೆ ತೋರುತ್ತದೆ. ದೃಷದ್ವತೀ ನದಿಯು ಸರಸ್ವತೀ ನದಿಯ ಉಪನದಿಯಾಗಿರುವುದರಿಂದ,

ಪಶ್ಚಿಮದಲ್ಲಿ ಆರಾವಲೀ ಪರ್ವತಶ್ರೇಣಿಯೂ ದಕ್ಷಿಣೋತ್ತರ ದಿಗ್ಭಾಗಗಳಲ್ಲಿ ಸರಸ್ವತೀ ದೃಷದ್ವತೀಗಳೂ ಇರುವ ಪ್ರದೇಶವೇ ಬ್ರಹ್ಮಾವರ್ತವೆನಿಸಿಕೊಂಡಿತ್ತೆಂಬ ಊಹೆಯನ್ನು ಹುಟ್ಟಿಸುತ್ತವೆ. ಈ ಊಹೆ ವಾಸ್ತವಿಕವೆಂದಾದರೆ ಈ ಎರಡು ನದಿಗಳು ಸಂಗಮಿಸುವ ಸ್ಥಳದಿಂದ ಪಶ್ಚಿಮಕ್ಕೆ ಆರಾವಲೀ ಪರ್ವತಶ್ರೇಣಿಯ ವರೆಗಿರುವ ತ್ರಿಕೋಣಾಕೃತಿಯ ಪ್ರದೇಶವೇ ಬ್ರಹ್ಮಾವರ್ತವೆಂಬ ಹೆಸರನ್ನು ಪಡೆದಿತ್ತೆಂದು ಸಿದ್ಧವಾಗುತ್ತದೆ.

ಬ್ರಹ್ಮಾವರ್ತವೆಂಬ ಹೆಸರಿನ ಪ್ರದೇಶವು, ಪುಣ್ಯಭೂಮಿಯೆನಿಸಿದ ಆರ್ಯಾವರ್ತದಲ್ಲಿಯೇ ಪವಿತ್ರತಮವಾದ ಪ್ರದೇಶವೆಂದು ತಿಳಿಯಲ್ಪಟ್ಟುದಕ್ಕೆ ಕಾರಣವೇನೆಂಬುದನ್ನು ಪ್ರಸ್ತುತ ಪುಸ್ತಕದ ೩ನೇ ಪುಟದಲ್ಲಿ ಯಥಾಮತಿಯಾಗಿ ತಿಳಿಸುವ ಪ್ರಯತ್ನ ಮಾಡಿರುತ್ತೇನೆ. ವಾಚಕರು ಆ ಭಾಗವನ್ನು ಇನ್ನೊಮ್ಮೆ ಪರಾಮರ್ಶಿಸಬೇಕಾಗಿ ವಿನಂತಿ. ಅಲ್ಲಿ ಹೇಳಿರುವಂತೆ ವೇದಗಳ ಜನ್ಮಸ್ಥಾನವು ಆ ಭೂಭಾಗವೆಂಬ ನನ್ನ ಊಹೆ ಯಥಾರ್ಥವಾದುದೆಂದಾದರೆ, – ನಮ್ಮ ದೇಶದ ಇತಿಹಾಸವನ್ನು ನಿರ್ಮಿಸಿದ ಪಾಶ್ಚಾತ್ಯ ಪಂಡಿತರ ಅಭಿಪ್ರಾಯದಂತೆ – ಆಸ್ಯಾ ಖಂಡದ ಮಧ್ಯಭಾಗದಿಂದ ಭಾರತಕ್ಕೆ ಇಳಿದು ಬಂದವರೆಂದು ಅವರು ನಿಶ್ಚಯಿಸಿರುವ ಆರ್ಯರೆಂಬ ಒಂದು ಜನಾಂಗದವರು ಪಂಜಾಬಿನಲ್ಲಿ ನೆಲಸಿದ್ದ ಕಾಲದಲ್ಲಿ ಋಗ್ವೇದವು ರಚಿಸಲ್ಪಟ್ಟಿತು ಎಂಬ (ನಿರಾಧಾರವಾದ) ಅಭಿಪ್ರಾಯದ ನಿರಸನವಾಗದಿರದು. ಪಾಶ್ಚಾತ್ಯ ಪಂಡಿತರ ಈ ಅಭಿಪ್ರಾಯವು ನಿಜವಾಗಿರುತ್ತಿದ್ದರೆ, ಋಗ್ವೇದದಲ್ಲಿಯೇ (೭–೩–೬) ಉಕ್ತವಾಗಿರುವ ನದೀನಾಮಗಳೊಳಗೆ ಪ್ರಧಾನವಾಗಿರುವ ಏಳನ್ನು ಹೆಸರಿಸುವಾಗ, ಪಂಜಾಬಿನ ಪಶ್ಚಿಮ ಭಾಗವಲ್ಲಿರುವ ಮಹಾನದಿಯಾದ ಸಿಂಧುವಿನ ಹೆಸರಿಂದ ಮೊದಲ್ಗೊಂಡು ಅದಕ್ಕಿಂತ ಪೂರ್ವದಲ್ಲಿ ಹರಿಯುತ್ತಿರುವ ನದಿಗಳನ್ನು ಒಂದೊಂದಾಗಿ ಹೆಸರಿಸಬೇಕಾಗಿತ್ತು. ಆದರೆ ಇಲ್ಲಿ ಸೂಚಿಸಿರುವ ಋಗ್ವೇದದ ಒಂದು ಸೂಕ್ತದಲ್ಲಿ (೭–೩–೬) ಕಂಡುಬರುವಂತೆ 'ಇಮಂ

---

3. ಈ ಮೇಲೆ ಉದ್ಧರಿಸಿದ ಋಗ್ವೇದದ ಸೂಕ್ತದಲ್ಲಿ, ನದೀನಾಮಗಳೊಳಗೆ ಪ್ರಧಾನವಾದವುಗಳನ್ನು ಹೆಸರಿಸುವಾಗ ಸರಸ್ವತೀ ನದಿಯನ್ನೂ ಹೆಸರಿಸುವುದರಿಂದ, ಆ ಸೂಕ್ತದ ರಚನಾಕಾಲದಲ್ಲಿ ಆ ನದಿಯಲ್ಲಿ ಸಾಕಷ್ಟು ವಿಪುಲವಾಗಿ ನೀರು ಹರಿಯುತ್ತಿದ್ದಿರಬೇಕೆಂಬ ತಥ್ಯವು ಗೋಚರವಾಗುತ್ತದೆ. ಸರಸ್ವತೀ ಎಂಬ ಹೆಸರಿನ ಅರ್ಥವನ್ನು ಈ ಮೇಲೆ ವಿವರಿಸಿದ ಸಂದರ್ಭದಲ್ಲಿ ಅದು ಬತ್ತಿಹೋಗುವ ಲಕ್ಷಣಗಳನ್ನು ಸೂಚಿಸುತ್ತಿತ್ತೆಂಬುದಾಗಿ ಹೇಳಲಾಗಿದೆಯಷ್ಟೆ. ಇದರಿಂದ ನನ್ನೀ ಮಾತುಗಳಲ್ಲಿ ಪೂರ್ವಾಪರ ವಿರೋಧವು ಗೋಚರಿಸುತ್ತಿರುವಂತೆ ಭಾಸವಾಗಬಹುದು. ಆದರೆ, ಆ ಕಾಲದಲ್ಲಿ ಸರಸ್ವತೀ ನದಿಯಲ್ಲಿದ್ದ 'ಸರಸ್ಸುಗಳು' ಸಣ್ಣವುಗಳೇನೂ ಆಗಿರದೆ ದೊಡ್ಡ ದೊಡ್ಡ ಸರೋವರಗಳಂತೆ ಇದ್ದುವೆಂದೂ, ಒಂದು ಸರಸ್ಸಿನಿಂದ ಇನ್ನೊಂದು ಸರಸ್ಸಿಗೆ ಹರಿಯುತ್ತಿದ್ದ ನೀರು ಕ್ಷೀಣ ಪ್ರವಾಹವಾಗಿರದೆ ಸಾಮಾನ್ಯವಾದೊಂದು ನದಿಯ ಜಲಪ್ರವಾಹದಂತೆಯೇ ಕಂಗೊಳಿಸುತ್ತಿತ್ತೆಂದೂ ಭಾವಿಸಿದಾಗ ನನ್ನ ಮಾತುಗಳಲ್ಲಿ ಪೂರ್ವಾಪರ ವಿರೋಧವೇನೂ ಕಂಡು ಬರಲಾರದು.

ಮೇ ಗಂಗೇ ಯಮುನೇ ಸರಸ್ವತೀ ಶುತುದ್ರಿ' – ಇತ್ಯಾದಿಯಾಗಿ, ಪೂರ್ವಭಾಗದಲ್ಲಿ ಹರಿಯುವ ಗಂಗಾನದಿಯ ಹೆಸರನ್ನು ಮೊದಲಾಗಿ ಹೇಳಿ ಮತ್ತೆ ಅದರ ಪಶ್ಚಿಮದಲ್ಲಿ ಹರಿಯುತ್ತಿರುವ ಯಮುನೆ, ಸರಸ್ವತೀ, [3] ಶುತುದ್ರಿ' (SUTLEJ) ಮೊದಲಾದವುಗಳ ಹೆಸರುಗಳನ್ನು ಕ್ರಮವಾಗಿ ಹೇಳಿ ಕೊನೆಗೆ 'ಸುಷೋಮಾ' (ಇದು ಸಿಂಧು ನದದ ಇನ್ನೊಂದು ಹೆಸರೆಂದು ಯಾಸ್ಕನು ಹೇಳುತ್ತಾನೆ–ನಿರುಕ್ತಗ್ರಂಥ : ಪು. ೪೨೩) ಎಂದು ಹೇಳಿರುವುದನ್ನು ಪರಾಮರ್ಶಿಸಿದರೆ ಪಂಜಾಬಿನಲ್ಲಿ ಋಗ್ವೇದವು ರಚಿತವಾದುದೆಂಬ ಅಭಿಪ್ರಾಯವು ಕಾಲ್ಪನಿಕವೆಂಬುದರಲ್ಲಿ ಸಂದೇಹದ ಲೇಶವೂ ಉಳಿಯಲಾರದು. ಸುಪ್ರಸಿದ್ಧವಾದ ನದೀನಾಮಗಳನ್ನು ಹೇಳುವ ಸಂದರ್ಭದಲ್ಲಿ ಗಂಗಾ ನದಿಯನ್ನು ಮೊದಲಾಗಿ ಹೇಳಿ ಮತ್ತೆ ಅದರ ಪಶ್ಚಿಮಕ್ಕಿರುವ ನದಿಗಳ ಹೆಸರುಗಳನ್ನು ಕ್ರಮವಾಗಿ (ಋಗ್ವೇದದಲ್ಲಿ) ಹೇಳಿರುವುದರಿಂದ, ವೇದಗಳ ಜನ್ಮಭೂಮಿ ಪಂಜಾಬ್ ಅಲ್ಲವೆಂದೂ ಪಂಜಾಬಿಗಿಂತ ಎಷ್ಟೋ ದಕ್ಷಿಣದಲ್ಲಿರುವ ಸರಸ್ವತೀ ದೃಷದ್ವತೀ ನದಿಗಳ ಮಧ್ಯಭಾಗವಾದ ಬ್ರಹ್ಮಾವರ್ತವೇ ವೇದಗಳ ಜನ್ಮಭೂಮಿಯೆಂದೂ ತಿಳಿಯಬೇಕಾಗಿದೆಯೆಂದು ನನಗನಿಸುತ್ತದೆ.

ಈ ಮೇಲಿನ ನನ್ನ ಊಹೆಯಂತೆ, ಆರಾವಲೀ ಪರ್ವತಶ್ರೇಣಿಯಲ್ಲಿ ಹುಟ್ಟಿದ ಸರಸ್ವತೀ ದೃಷದ್ವತೀ ನದಿಗಳು ಬತ್ತಿಹೋಗುವುದಕ್ಕೆ ಕಾರಣವೇನಿರಬಹುದೆಂಬುದನ್ನು ಊಹಿಸುವುದು ಸುಲಭವೇನೂ ಅಲ್ಲ. ಆ ಪರ್ವತಶ್ರೇಣಿಯ ಪೂರ್ವೋತ್ತರ ಪ್ರದೇಶವು ಇಂದು ಮರುಭೂಮಿಯಾಗಿರುವುದಕ್ಕೂ ಪೂರ್ವೋಕ್ತವಾದ ಆ ಎರಡು ನದಿಗಳು ಬತ್ತಿಹೋಗಿರುವುದಕ್ಕೂ ಕಾರಣವು ಒಂದೇ ಆಗಿದ್ದಿರಬೇಕೆಂಬುದರಲ್ಲಿ ಮಾತ್ರ ಸಂದೇಹಪಡಬೇಕಾಗಿಲ್ಲವೆಂದು ಹೇಳಬಹುದಾಗಿದೆ. ಹೀಗೇಕಾಯಿತೆಂಬುದರ ಮತ್ತು ಅದರ ಆರಂಭವು ಎಂದು ಆಗತೊಡಗಿತೆಂಬುದರ ರಹಸ್ಯವನ್ನು ಒಂದು ವೇಳೆ ಭೂಗರ್ಭವಿಜ್ಞಾನಿಗಳು ತಿಳಿಯಬಲ್ಲರೋ ಏನೋ. ಇದನ್ನು ಅವರು ನಿಶ್ಚಿತವಾಗಿ ತಿಳಿಯಬಲ್ಲವರಾದರೆ ವೇದಗಳ ಆವಿರ್ಭಾವದ ಕಾಲವನ್ನು ಊಹಿಸುವುದಕ್ಕೆ ಅವರ ತಿಳಿವು ಸಹಾಯಕವಾಗಲೂಬಹುದೆಂದು ನನ್ನ ಭಾವನೆ.

# ಅರ್ಜುನವಾಡದ ಶಿಲಾಲೇಖ

---

—ಎಚ್. ದೇವೀರಪ್ಪ

ಬಸವಣ್ಣನವರ ಜೀವನಚರಿತ್ರೆಯನ್ನು ತಿಳಿಯಬೇಕೆಂಬ ಘನ ಉದ್ದೇಶದಿಂದ, ಅನೇಕ ಇತಿಹಾಸಕಾರರು ವಿದ್ವಾಂಸರು, ಸಂಬಂಧಪಟ್ಟ ಶಾಸನ ಸಾಹಿತ್ಯವನ್ನು ಸಂಗ್ರಹಿಸುತ್ತಿದ್ದಾಗ ಮೊದಲು ದೊರಕಿದುದೆಂದರೆ ಅರ್ಜುನವಾಡದ ಶಿಲಾಶಾಸನವೆ. ಅದು ಪ್ರಕಟವಾದುದು ಕ್ರಿ.ಶ. ೧೯೨೮ರಲ್ಲಿ, 'ಶಿವಾನುಭವ' ತ್ರೈಮಾಸಿಕದಲ್ಲಿ. ಆಗ ಶರಣ ಸಾಹಿತ್ಯದ ಅಭಿಮಾನಿಗಳಿಗಾದ ಆನಂದ ಅಷ್ಟಿಷ್ಟಲ್ಲ. ಅಂದಿನಿಂದ ಇಂದಿನ ವರೆಗೆ ಅದರೊಳಗಿನ ಒಂದು ಕಂದ ಪದ್ಯವನ್ನು ಪ್ರಸಾರಿಸುವ ಕಾರ್ಯ ನಡೆದೇ ಇದೆ.

ಈ ಶಾಸನ ಹುಟ್ಟಿದುದು ಕ್ರಿ. ಶ. ೧೨೬೦ರಲ್ಲಿ ಎಂದು ಹೇಳಲಾಗಿದೆ. ಯಾದವ ವಂಶದ ಕನ್ನರನು "ದೇವಗಿರಿಯ ನೆಲೆವೀಡಿನೊಳು"ರಾಜ್ಯವಾಳುತ್ತಿದ್ದಾಗ ಆತನ ಕೈ-ಕೆಳಗೆ ಅಧಿಕಾರಿಯಾಗಿದ್ದ ಚಾವುಂಡನೂ ಆತನ ಮನದನ್ನನಾದ ನಾಗನೂ ಕವಿಳಾಸಪುರದ ಹಾಲ ಬಸವಿ ದೇವರು ಎಂಬ ವೀರವ್ರತಿಗಳಿಗೆ ಕೆಲವು ಗ್ರಾಮುಗಳನ್ನು ಉಂಬಳಿ ಬಿಟ್ಟ ಸಂಗತಿ ಆ ದಾನಶಾಸನದಲ್ಲಿದೆ. ಪ್ರಾಸಂಗಿಕವಾಗಿ ಬಸವಣ್ಣನವರ ಹೆಸರೂ ಅಲ್ಲಿ ಉಲ್ಲೇಖಿಸಲ್ಪಟ್ಟಿರುವುದರಿಂದ ಅದಕ್ಕೆ ಪ್ರಾಶಸ್ತ್ಯಬಂದುದು*. ಅದರಲ್ಲಿರುವ ವಿಷಯವನ್ನು ಅದೇ ಕ್ರಮದಲ್ಲಿ ಹೀಗೆ ಸಂಗ್ರಹಿಸಬಹುದು.

೧. 'ನಮಸ್ತುಂಗ ಶಿರಶ್ಚುಂಬಿ' ಎಂದು ಆರಂಭವಾಗುವ ಮಂಗಳ ಶ್ಲೋಕ.

೨. ಕಲ್ಲಿನಾಥದೇವರ ಸ್ತೋತ್ರವನ್ನೊಳಗೊಂಡಿರುವ ಒಂದು ಕನ್ನಡ ವೃತ್ತವಿದ್ದು ಅದರಲ್ಲಿ ಛಂದೋ ದೋಷಗಳಿವೆ.

---

* ಬೆಳಗಾಂ ಜಿಲ್ಲೆಯ ಹುಕ್ಕೇರಿ ಎಂಬ ಗ್ರಾಮಕ್ಕೆ ಎರಡು ಕಿಲೋ ಮೀಟರ್ ದೂರದಲ್ಲಿರುವ ಅರ್ಜುನವಾಡ ಗ್ರಾಮದ ಹಾಲಶಂಕರಲಿಂಗ ದೇವಾಸ್ಥನದಲ್ಲಿದ್ದ ಈ ಶಾಸನದ ಕಲ್ಲನ್ನು ಬಾಗೇವಾಡಿಗೆ ತಂದು ತಾಲೂಕ್ ಕಛೇರಿಯಲ್ಲಿ ಜೋಪಾನ ಮಾಡಿ ಇಡಲಾಯಿತು. ಮತ್ತೆ ಈಗ್ಗೆ ಕೆಲವು ವರ್ಷಗಳ ಹಿಂದೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಗೆ ಸಾಗಿಸಿದೆ. ಅದ್ದರಿಂದ ಈ ಓಡಾಡುವ ಶಾಸನದ ಮಹತ್ವ ಇನ್ನಷ್ಟು ಹೆಚ್ಚಾಯಿತು- ಇದರಲ್ಲಿ ಏನಿದೆ ಎಂಬುದನ್ನು ತಿಳಿಯಲು ಮತ್ತೆ ಮತ್ತೆ ಪರೀಕ್ಷಿಸಲೆಳಸುವುದು ಸ್ವಾಭಾವಿಕವೆ.

೩. "ಶ್ರೀಮತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಸ್ವರ ಮಾದಿ ರಾಜನ ತನೂಜಂ ಬಸವರಾಜನ ಮಹಿಮೆಯೆಂತೆಂದೊಡೆ" ಎಂಬ ಗದ್ಯ, ಅನಂತರ ಬಸವಣ್ಣನವರನ್ನು ಕುರಿತ ಒಂದು ಕಂದ ಪದ್ಯ.

೪. ಯಾದವ ಕನ್ನರ ದೇವನ ವಂಶಾವಳಿ, ಅವನ ಶೌರ್ಯ ಸಾಹಸಗಳು ಬಿರುದಾವಳಿಗಳು.

೫. ಕನ್ನರನ ಪಾದಪದ್ಮೋಪಜೀವಿಯಾದ ಚಾವುಂಡನ ವಂಶಾವಳಿ, ಮತ್ತು "ಪಾರ್ವತೀವಲ್ಲಭಚರಣಸರೋಜದ್ವಯಾಮೋದಭ್ರಿಂಗ"ನಾಗಿದ್ದ ಆತನ ಗುಣ ಶೀಲ ವಿದ್ಯಾವಿವೇಕಗಳ ನಿರೂಪಣೆ

೬. ಚಾವುಂಡನ "ಮನ್ನದನ್ನ" ನೂ "ಅಖಿಳನಿಯೋಗಿ" ಯೂ ಆಗಿದ್ದ ನಾಗರಾಜನ ಪ್ರಸ್ತಾಪ. ಆತನನ್ನು "ತ್ಯಾಗಗುಣಕ್ಕೆ ತಾಯ್ವನೆ," "ಪಂಡಿತ ಪಾರಿಜಾತ", "ಜನಾರ್ದನನ ಭಕ್ತಿ ಪ್ರಭವಾನುರಾಗ"–ಎಂದು ಮುಂತಾಗಿ ಪ್ರಶಂಸಿಸಲಾಗಿದೆ.

೭. ದಾನಪರಿಗ್ರಹ ಮಾಡಿದ ಹಾಲ ಬಸವಿ ಮುನೀಶನ ವಂಶಾವಳಿ–ಇದು ಈ ಶಾಸನದ ಬಹು ಮುಖ್ಯ ಭಾಗ ಮತ್ತು ವಾದಗ್ರಸ್ತ ಸಂಗತಿ ಗಳುಳ್ಳದು.

ಸಂಗನ ಬಸವನ ಅಗ್ರ (ಜ)
ಲಿಂಗೈಕಂ ದೇವರಾಜ ಮುನಿಪನ ತನಯಂ
ಜಂಗಮ ಪರುಸಂ (ಬಸವ ?) ರ
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ
ಕಲಿದೇವ ಮುನಿಪನಾತ್ಮಜ
ಸಲೆ ಮೂಜಗದೊಳಗೆ ಮೆಱೆವ ಮಾನವ ದೇವಂ
ಗೆಲಿದಂ ಆಸನ ಬೆಸನವಂ
ಛಲರಥಿಹಂಹಾಲ ಬಸವಿ ದೇವ ಮುನೀಸಂ

ಸ್ವಸ್ತಿ ಸಮಸ್ತ ಭುವನಾಶ್ರಯಂ ಮಹಾಮಹೇಶ್ವರಂ ಕವಿಳಾಸಪುರವರಾಧೀಶ್ವ ರರುಂ ಸುವರ್ಣ ವ್ರಿಷಭಧ್ವಜ ತೇಸಶ್ಠಿ ಪುರಾಥ ಪಾದಾರ್ಚಕರುಂ ಮಹಾಲಿಂಗ ಜಂಗಮ ಪ್ರಸಾದನಿಯತರುಂ ಸಮಯಭಕ್ತಿ ಸಂಪನ್ನ ಬಸವರಾಜನನ್ವಯರುಮಪ್ಪ ತಪಚಕ್ರವರ್ತಿ ವೀರವ್ರತಿ ಹಾಲಬಸವಿದೇವಂಗೆ" ಎಂದಿದೆ.

೮. ದಾನವೀಯಲು ನಿರ್ಧರಿಸಿದ ಸಂದರ್ಭವನ್ನು ಕುರಿತ ಲೇಖವಿದು : "ಆ ಮಹಾಪ್ರಧಾನಂ ಅಟ್ಟರಾಜ್ಯ ಪ್ರತಿಷ್ಠಾ ಚಾರ್ಯನುಮಪ್ಪ ನಾಗರಸರು ಸಕ

ವರುಷಂ ಸಾಸಿರದ ನೂಱ ಯೆಂಭತ್ತಯೆರಡನೆಯ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳ ಅಮಾಸೆ ಸೂರ್ಯಗ್ರಹಣದಲ್ಲಿ ಪುಲಿಗೆಱೆಯ ಸೋಮನಾಥ ದೇವರ ಸಂನಿಧಿಯಲ್ಲಿ ಆ ಚೌಡಿಸೆಟ್ಟಿಯರ್ ತೀರ್ಥವಿಶೇಷಮಂ ಬೆಸಗೊಳಲು ನೊಳೆ ನಾಡೊಳಗಿನ ಕವಿಳಾಲಸ ತೀ(ರ್ಥಂ) ನಾಲ್ಕುಯುಗದ ಪುರಾಣೋಕ್ತದಿಂ ಬಂದ ಕ್ಷೇತ್ರವೆಂತೆಂದಡೆ"

೯. ಕ್ಷೇತ್ರ ಮಾಹಾತ್ಮ್ಯ : "ಕೃತದಲ್ಲಿ ಕವಿಳಾಸಮುನಿ ಕವಿಳಾಸನಾಥ [;] ತ್ರೇತೆಯಲ್ಲಿ ಅಂಕ ರಾಜಮುನಿ ಅಂಕನಾಥ [;] ದ್ವಾಪರದಲ್ಲಿ ಮಹಾರಾಜಮುನಿ ಮಹಾಲಿಂಗದೇವ [;] ಕಲಿಯುಗದಲ್ಲಿ ಕಲರಾಜಮುನಿ ಕಲಿದೇವನಾಮ [||] ಇ ಮುನಿಮುಕ್ಷ ಸಮಸ್ತ ಗಣೇಸ್ವ [ರ]ರು ಆರಾಧಿಸಿ ಸಾಲೋಕ್ಯ ಸಾಮೀಪ್ಯ ಸಾಯಜ್ಜಮಂ ಪಡದರು. ಆ ದೇವರಿಗೆ ಅಂಕನಾಥ ವೆಸರಿಂ" ಮಾಂಧಾತ ಚಕ್ರವರ್ತಿಗಳು ಬಿಟ್ಟ ಧರ್ಮ ಎಂಬುದನ್ನು ಚೌಡಿಸೆಟ್ಟಿಯರು ಕೇಳಿ ತಿಳಿದುಕೊಂಡರು. ಹೇಳಿದವರಾರೋ ಗೊತ್ತಾಗುವುದಿಲ್ಲ.

೧೦. ದತ್ತಿಯ ವಿವರಗಳು : "ಪು [ನಾ] ನಾಗರಸರು ತಾವು ಏಕಸ್ಥವಾಗಿ ಕವಿಳಾಸಪುರದೊಳಗೆ ಸ್ವಯಂಭು ಮಲ್ಲಿಕಾರ್ಜುನ ಸಂಗಮೇಸ್ವರ ನಾಗೇಶ್ವರ ಈ ಮೂಱು ಲಿಂಗಕಂ (ದಾನದ ವಿವರ ಇದೆ).... ಸರ್ವಬಾಧೆ ಸರ್ವ ಸಮಸ್ಯಮಂ ಮಾಡಿ ಚವುಡಿ ಸೆಟ್ಟಿಯೆರು ನಾಗರಸರು ಯತಿರಾಯ ಹಾಲಬಸನಿ ದೇವಂಗೆ ಪೂರ್ವದತ್ತವೆಂದು ನಾಲ್ಕು ಗ್ರಾಮಗಳನ್ನು ಧಾರಾಪೂರ್ವಕಂ ಮಾಡಿಕೊಟ್ಟರು.

೧೧. ಮುಗಿವು : "ಕವಿಳಾಸಪುರವೆ ಸಾಸನದವನೆ, ಬಸವರಾಜನೆ ಸಾಸನಿಕನೆಂದು ಮುಭಯ ನಾನಾದೇಸಿ ಮುಮ್ಮುರಿ ದಂಡಂಗಳು ಕಾವ ಸಾಸನ"

—ಇಷ್ಟು ಶಾಸನೋಕ್ತ ವಿಷಯ. ಇದು ಎಲ್ಲ ಶಾಸನಗಳಂತಿಲ್ಲ ಎನ್ನಿಸುತ್ತದೆ. ಏಕೆಂದರೆ, ಹದಿಮೂರು ಹದಿನಾಲ್ಕನೆ ಶತಮಾನದ ಕನ್ನಡ ದಾನ ಶಾಸನಗಳ ಅನೇಕ ಲಕ್ಷಣಗಳು ಇದರಲ್ಲಿಲ್ಲ. ಆ ಕಾಲದ ದಾನ ಶಾಸನಗಳ ವಿಷಯಾನುಪೂರ್ವಿ, ಸಾಮಾನ್ಯವಾಗಿ ಈ ಕೆಳಗೆ ಹೇಳಿರುವಂತಿರುತ್ತದೆ :

೧. ಮಂಗಳಶ್ಲೋಕ

೨. ಇಷ್ಟ ದೈವದ ಸ್ತುತಿ

೩. ಆ ಸಮಯದಲ್ಲಿ ರಾಜ್ಯವಾಳುತ್ತಿದ್ದ ಅರಸರ (ಅಥವಾ ಸಾಮಂತ, ಮಾಂಡಲಿಕ, ಮಂತ್ರಿಗಳ) ವಂಶಾವಳಿ, ಬಿರುದು ಶೌರ್ಯ ಸಾಹಸ ಔದಾರ್ಯಾದಿ ಸದ್ಗುಣಗಳು.

೪. ದಾನ ಕೊಟ್ಟ ಕಾಲ, ದೇಶ, ಸ್ಥಳನಾಮ

೫. ದಾನವನ್ನು ಪರಿಗ್ರಹಿಸಿದವರ ಕುಲಗೋತ್ರಗಳು, ವಂಶಾವಳಿ ಅಥವಾ ಪಟ್ಟಾವಳಿ, ಅವರ ಗುಣವಿಶೇಷಗಳು. ದಾನ ಪಡೆಯುವುದು ಒಂದು ಸಂಸ್ಥೆಯಾಗಿದ್ದರೆ ಅದರ ವರ್ಣನೆ

೬. ದಾನವಿತ್ತ ಗ್ರಾಮದ ಅಥವಾ ಭೂಮಿ ಇತ್ಯಾದಿಗಳ ವಿವರ

೭. ದಾನಪಾಲಿಸಿದವನಿಗೆ ಪುಣ್ಯವೂ ಅಳಿದವನಿಗೆ ಪಾಪವೂ ಬರುವುದೆಂಬುದನ್ನು ಸೂಚಿಸುವ, ಒಂದೊಂದು ಕಡೆ ದಾನವನ್ನು ಅಳಿದವನಿಗೆ ಶಪಿಸುವ ವಾಕ್ಯಗಳು ಅಥವಾ ಪದ್ಯಗಳು

೮. ದಾನ ಶಾಸನ ಬರೆದವರ ಮತ್ತು ಕಂಡರಿಸಿದರ ಹೆಸರುಗಳು

ಇವುಗಳಲ್ಲಿ ಕೆಲವು ಭಾಗಗಳು ಅನೇಕ ಶಾಸನಗಳಲ್ಲಿರುವುದಿಲ್ಲ.ಮುಖ್ಯ ಭಾಗಗಳು ಇದ್ದೇ ತೀರಬೇಕು. ಆದರೆ ಅರ್ಜುನವಾಡದ ಶಾಸನ ಈ ಸಾಮಾನ್ಯ ನಿಯಮಕ್ಕೆ ಹೊರತಾಗಿದೆಯೋ ಏನೋ ಎನ್ನಿಸುತ್ತಿದೆ. ಬಸವಣ್ಣನವರನ್ನು ಬಸವರಾಜ, ಸಂಗನಬಸವ ಬಸವರಸ ಎಂದು ಮುಂತಾಗಿ ಐದು ಕಡೆ ಹೆಸರಿಸಿರುವುದೂ ಈ ಶಾಸನವು 'ಸಾಚಾ'ವೋ ಕೂಟಶಾಸನವೋ ಎಂಬ ಸಂದೇಹಕ್ಕೆ ಮೂಲ. ಶಾಸನದ ಕೊನೆಯಲ್ಲಿ ಅದನ್ನಳಿಯುವವರಿಗೆ ಪಾಪ ಶಾಪಗಳ ಬೆದರಿಕೆ ಹಾಕುವುದು ಸಾಮಾನ್ಯ. ಇಲ್ಲಿ "ನಾನಾದೇಶಿ ಮುಂಮುರಿ ದಂಡಂಗಳು ಕಾವ ಶಾಸನ" ಎಂದು ಮಾತ್ರ ಬರೆಸಿರುವುದು ಆ ಸಂದೇಹವನ್ನು ಇನ್ನಷ್ಟು ಬಲಗೊಳಿಸುವುದು.

ಆದುದರಿಂದ ಈ ಶಾಸನವನ್ನು ಹಲವು ನಿಟ್ಟುಗಳಿಂದ ನಿರೀಕ್ಷಿಸಿ ಪರೀಕ್ಷಿಸಿ ಸಂಶಯ ನಿವಾರಣೆ ಮಾಡಿಕೊಂಡು ಅನಂತರ ಇದರ ಗುಣಮೌಲ್ಯಗಳನ್ನು ನಿರ್ಧರಿಸಬೇಕಾಗುತ್ತದೆ. ಇದರಲ್ಲಿ ಒಟ್ಟು ಎಂಬತ್ತು ಪಂಕ್ತಿಗಳಿವೆ. ಮೊದಲ ಮೂವತ್ತು ಪಂಕ್ತಿಗಳ ಶೈಲಿ ತಕ್ಕಮಟ್ಟಿಗೆ ಉತ್ತಮವಾಗಿದೆ. ಇನ್ನುಳಿದ ಭಾಗದ ಶೈಲಿ ಶುಷ್ಕವಾಗಿದೆ. ಭಾಷೆ ಅನೇಕ ದೋಷಗಳನ್ನೊಳಗೊಂಡಿದೆ. ಪೂರ್ವಾರ್ಧದ ಚಾವುಂಡ ಉತ್ತರಾರ್ಧದಲ್ಲಿ ಚಾಡಿಸೆಟ್ಟಿಯಾಗಿದ್ದಾನೆ. ದಾನಿಗಳಲ್ಲೊಬ್ಬನಾದ ನಾಗರಸನು ಆದಿಭಾಗದಲ್ಲಿ "ಚಾವುಂಡನ ಮನದನ್ನ" "ಅಖಿಳನಿಯೋಗಿ" ಮಾತ್ರ ಆಗಿರುವನು. ಅದೇ "ನಾಗ" ಉತ್ತರ ಭಾಗದಲ್ಲಿ "ಮಹಾಪ್ರಧಾನ" "ಜಿಟ್ಟರಾಜ್ಯ ಪ್ರತಿಷ್ಠಾಚಾರ್ಯ." ದಾನ ಕೊಡುವ ಸಂದರ್ಭವನ್ನು ನಿರೂಪಿಸುವ ಗದ್ಯ ತುಂಬ ನೀರಸವೂ ಗ್ರಾಮ್ಯವೂ ಆಗಿರುವುದು. ಶಾಸನಗಳನ್ನು ಕಂಡರಿಸುವವರು ಸಾಧಾರಣವಾಗಿ ವಿದ್ಯಾವಂತರಾಗಿರುವುದಿಲ್ಲವೆಂದೂ ಆದುದರಿಂದ ಅಲ್ಲಿನ ವ್ಯಾಕರಣ ದೋಷಗಳನ್ನೂ ಛಂದೋದೋಷಗಳನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಬಾರದೆಂದೂ ತಜ್ಞರು ಹೇಳುವುದರಿಂದ ಈ ದೋಷಗಳನ್ನು ಮರೆತು ಇನ್ನುಳಿದ ವಿಷಯಗಳನ್ನು ಪರಿಶೀಲಿಸೋಣ.

ಹಾಲಬಸವಿದೇವರು ಕೆಲವು ಗ್ರಾಮಗಳನ್ನು ಉಂಬಳಿ ಉತ್ತಾರಗಳನ್ನೂ

ಪಡೆಯುವರಷ್ಟೆ. ಅವನ್ನವರು ಹೊಸದಾಗಿ ಪಡೆಯಲಿಲ್ಲ. ಶಾಸನದಲ್ಲಿಯೇ ಹೇಳಿರುವಂತೆ, ಅವುಗಳಲ್ಲಿ ಬಹುಪಾಲು, ಅಂದರೆ ಅಂಕವಲ, ತಳವರ್ತಿ, ಕೊತ್ತಸಿ ಕುರುವನಿಗೆ–ಈ ಗ್ರಾಮಗಳು ತ್ರೇತಾಯುಗದಲ್ಲಿ ಮಾಂಧಾತ ಚಕ್ರವರ್ತಿ ಕೊಟ್ಟ ವೃತ್ತಿಗಳು; "ಆ ದೇವರಿಗೆ ಅಂಕನಾಥವೆಸರಿಂ" ಬಿಟ್ಟಂಥವು. ಮತ್ತೆ ಆ ನಾಲ್ಕು 'ಪಟ್ಟಣ'ಗಳನ್ನೆ ಚಾಉಡಿಸೆಟ್ಟಿ ನಾಗರಸರು ಕವಿಳಾಸಪುರದ "ಮಲ್ಲಿಕಾರ್ಜುನ ಸಂಗಮೇಶ್ವರ,ನಾಗೇಶ್ವರ-ಈ ಮೂಱು ಲಿಂಗಕಂ ಅಂಗಭೋಗ ರಂಗಭೋಗ ಜೀರ್ಣೋದ್ಧಾರಕಂ ಪಾರಣೆಯ ಜಂಗಮಾರಾಧನೆಗಂ" "ಪುನರ್ದತ್ತವೆಂದು ಧಾರಾಪೂರ್ವಕಂ ಮಾಡಿಕೊಟ್ಟರು ಎಂದು ಅದೇ ಶಾಸನದಲ್ಲಿ ಹೇಳಿದೆ. ಹಾಗಾದರೆ ಕೃತತ್ರೇತ ದ್ವಾಪರ ಕಲಿಯುಗಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಪೂಜಿಸಿಕೊಂಡ ಕವಿಳಾಸನಾಥನಿಗೆ "ಅಂಕನಾಥವೆಸರಿಂ" ಕೊಟ್ಟದತ್ತಿಯನ್ನು ಹಿಂದೆಗೆದುಕೊಂಡು ಬೇರೆ ದೇವರುಗಳಿಗೆ, ಕೊಟ್ಟರು ಎಂದು ತಿಳಿದುಕೊಳ್ಳಬೇಕೆ ? ಚಾಉಡಿಸೆಟ್ಟಿ ನಾಗರಸರು ಇಬ್ಬರೂ ಸೇರಿ ಧಾರಾಪೂರ್ವಕ ಮಾಡಿಕೊಟ್ಟ ದತ್ತಿಯನ್ನು "ಚಾಉಡಿಸೆಟ್ಟಿಯರ ನಿರೂಪದಿಂ" ನಾಗರಸರು "ಈ ಧರ್ಮಕೆ ಈ ವಿವರವೆಂದು" ದತ್ತಿಯ ಒಂದೊಂದು ಭಾಗವನ್ನು ಮಲ್ಲೇಶ್ವರ ದೇವರಿಗೆ, ನಾಗೇಶ್ವರನಿಗೆ, ಸಂಗಮೇಶ್ವರನಿಗೆ, ಪಾರಣೆಯ ಜಂಗಮಾರಾಧನೆಗೆ, ಗೊತ್ತು ಮಾಡುವರು. ಅಲ್ಲಿಯೂ ಅಂಕನಾಥನ ಹೆಸರಿಲ್ಲ. ಮೇಲಾಗಿ, ಆ ಮೂರು ದೇವರುಗಳಿಗೂ ಹಾಲಬಸವಿ ದೇವರಿಗೂ ಏನು ಸಂಬಂಧ, ಅದೂ ಗೊತ್ತಾಗದು. ಶಾಸನ ಸಿಕ್ಕಿದುದು ಅರ್ಜುನವಾಡದ ಹಾಲಶಂಕರಲಿಂಗ ದೇವಸ್ಥಾನದಲ್ಲಿ. ಕವಿಳಾಸಪುರದ ಒಂದು ದೇವಸ್ಥಾನದಲ್ಲಿರಬೇಕಾದ ಆ ಶಾಸನ ಅರ್ಜುನವಾಡಕ್ಕೇಕೆ, ಹೇಗೆ ಹೋಯಿತೋ ಗೊತ್ತಾಗುವುದಿಲ್ಲ.

ಚಾಉಡಿ ಸೆಟ್ಟಿ ನಾಗರಸರು ಕವಿಳಾಸಪುರದ ಮೂರು ದೇವರುಗಳಿಗೂ ಪಾರಣೆ ಜಂಗಮಾರಾಧನೆಗೂ 'ವೃತ್ತಿ' ಬಿಡಬೇಕೆಂದು ನಿರ್ಧರಿಸಿದ್ದು ಪುಲಿಗೆರೆಯ ಸೋಮನಾಥನ ಸನ್ನಿಧಿಯಲ್ಲಿ. ಅವರಿಬ್ಬರೂ ಪುಲಿಗೆರೆಗೆ ಹೋದುದು "ಸಕವರುಷಂ ಸಾಸಿರದ ನೂಱ ಎಂಬತ್ತಯೆರಡನೆಯ ಸಿದ್ಧಾರ್ಥಿ ಸಂವಛರದ ಚೈತ್ರ ಬಹುಳ ಅಮಾಸೆ ಸೋಮವಾರ ಸೂರ್ಯಗ್ರಹಣ"ದ ದಿನ. ಅಂದೇ ಅಲ್ಲಿಯೇ ಅವರು "ನೊಲಿ ನಾಡೊಳಗಿನ ಕವಿಳಾಸ ತೀರ್ಥ"ದ ಮಾಹಾತ್ಮ್ಯವನ್ನು ಕೇಳಿ ತಿಳಿದುಕೊಂಡುದು. ಅನಂತರ ಕವಿಳಾಸಪುರಕ್ಕೆ ಬಂದು "ಯತಿರಾಯ ಹಾಲಬಸವಿದೇವಂಗೆ ಪೂರ್ವದತ್ತವೆಂದು ಧಾರಾಪೂರ್ವಕಂ" ಮಾಡಿಕೊಟ್ಟುದು. ಕೊಟ್ಟ ದಿನ ಯಾವುದೆಂಬುದು ಶಾಸನದಿಂದ ಗೊತ್ತಾಗುವುದಿಲ್ಲ. ದಾನಶಾಸನಗಳಲ್ಲಿ ಸಾಧಾರಣವಾಗಿ ದಾನವಿತ್ತ ದಿನ ವಾರ ತಿಥಿ ತಿಂಗಳು ಸಂವತ್ಸರ ಮುಂತಾದ ವಿವರಗಳಿರುತ್ತವೆ. ಇಲ್ಲಿ ಬೇರೊಂದು ಘಟನೆಗೆ ಸಂಬಂಧಿಸಿದ ತೇದಿಯ ಪ್ರಸ್ತಾಪವಿದೆ.

ಇನ್ನು, ದಾನಸ್ವೀಕಾರ ಮಾಡಿದ ಹಾಲಬಸವಿದೇವ ಮುನಿಪನು ನಿಜ

ವಾಗಿಯೂ ಕಲ್ಯಾಣದ ಬಸವಣ್ಣನವರ ಅಣ್ಣನ ಮೊಮ್ಮಗನೇ ಎಂಬ ಪ್ರಶ್ನೆ. ಬಸವಣ್ಣನವರು,

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆ ಬಡವನಯ್ಯ
ಎನ್ನ ಕಾಲೇ ಕಂಭ ದೇಹವೇ ದೇಗುಲ
ಶಿರವೆ ಹೊನ್ನ ಕಳಸವಯ್ಯ
ಕೂಡಲ ಸಂಗಮ ದೇವ ಕೇಳಯ್ಯ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ

—ಎಂದು ಸ್ಥಾವರಲಿಂಗಾರಾಧನೆಯನ್ನು ಪರಿಹಾಸ್ಯ ಮಾಡಿದ್ದಾರೆ. ಅವರ ಬಳಗ ದವರಾದ ಅನೇಕ ವಚನಕಾರರು 'ಗುಡಿಯ ಲಿಂಗ'ವನ್ನು ಪೂಜಿಸುವುದನ್ನು ಅತ್ಯಂತ ಕಟುವಾದ ಮಾತಿನಲ್ಲಿ ಖಂಡಿಸಿರುವುದು ಸುಪ್ರಸಿದ್ಧ ಸಂಗತಿ. "ಬಸವರಾಜನನ್ವಯ ರುಂ" ಎಂದು ಹೇಳಿಕೊಂಡಿರುವ ಹಾಲಬಸವಿದೇವ ಮುನಿಪನು" ಶಿವ ದೇವಾಲಯ ಗಳಲ್ಲಿ ಸೇವಾ ಕಾರ್ಯಗಳನ್ನು ಮಾಡಿಸುವುದಕ್ಕಾಗಿ ದತ್ತಿ ಸ್ವೀಕಾರ ಮಾಡಿದನೆಂಬು ದನ್ನು ನಂಬುವುದು ಹೇಗೆ? ಮಂಡಗೆಯ ಮಾದಿರಾಜನಿಗೆ ದೇವರಾಜನೆಂಬ ಇನ್ನೊಬ್ಬ ಮಗನಿದ್ದನೆಂದು ಯಾವ ಒಂದು ಗ್ರಂಥದಲ್ಲಿಯೂ ಹೇಳಿರುವುದಿಲ್ಲ, ಬೇರೆ ಯಾವ ಶಾಸನವೂ ಹೇಳಿಲ್ಲ. ಇದೇ ಶಾಸನದ ಆದಿ ಭಾಗದಲ್ಲಿ ಶ್ರೀಮತ್ತರದವಾಡಿ ಮಧ್ಯ ಗ್ರಾಮ ಬಾಗವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆಯೆಂತೆಂದೊಡೆ" ಎಂದು ಮಾತ್ರ ಇರುವುದು.ದೇವರಾಜನ ಹೆಸರಿಲ್ಲ. ಆದುದ ರಿಂದ ಶಾಸನೋಕ್ತ ದೇವರಾಜನು ಬಸವಣ್ಣನವರ ಅಣ್ಣನಹುದೋ ಅಲ್ಲವೋ ಸಂಶಯ. "ಬಸವರಾಜನ ಮಹಿಮೆಯೆಂತೆಂದೊಡೆ" ಎಂದು,ಅವನ ಮಹಿಮೆಯನ್ನು ಹೇಳುವುದನ್ನೇ ಮರೆತಿದ್ದಾನೆ "ಶಾಸನಿಗ ಬಸವಣ್ಣ"

ಹೀಗೆ, ಈ ಶಾಸನದಲ್ಲಿ ಪೂರ್ವಾಪರ ವಿರೋಧಗಳಿವೆ; ಇದರ ಉತ್ತರ ಭಾಗ ದಲ್ಲಿ ಅನೇಕ ವ್ಯಾಕರಣ ದೋಷಗಳಿವೆ; ಅಪಶಬ್ದಗಳಿವೆ. ಬಸವಣ್ಣನವರ ಉದಾತ್ತ ವಿಚಾರಗಳಿಗೆ ತೀವ್ರ ವಿರೋಧವಾದ ಅಂಶಗಳನ್ನೊಳಕೊಂಡಿದೆ ಇದು. ಶಾಸನರಚನಾಪದ್ಧತಿಗೆ ಅನುಗುಣವಾಗಿಲ್ಲ. ಆದುದರಿಂದ ಈ ಶಾಸನದಲ್ಲಿರುವ ವಿಷಯಗಳ ಸತ್ಯಾ ಸತ್ಯತೆಗಳ ಬಗೆಗೆ ಪುನರಾಲೋಚನೆ ಅಗತ್ಯವಾಗಿರುವುದು. □

# ನನ್ನೂಲ್ ನೋಟ

## 1. ನನ್ನೂಲಿನ ಮುನ್ನೂಲ್‌ಗಳು

---

ಸಿ. ನಟರಾಜ್

1. ಇದುವರೆಗೆ ಕನ್ನಡದ ಶಬ್ದಶಾಸ್ತ್ರಗಳನ್ನು ಕುಱಿತು ವಿಚಾರಮಾಡಿರುವ ಗ್ರಂಥಗಳಿಂದ, ತನ್ನ ಸೋದರಭಾಷೆಗಳಲ್ಲಿ ಒಂದಾದ, ತಮಿೞಿನ ಕೃತಿಕರ್ತೃಶಬ' ಪರಿಚಯಗಳನ್ನು ಅಂತೆಕಂತೆಗಳ ಆಶ್ಚರ್ಯೋದ್ಗಾರಗಳಲ್ಲಿಯೂ-'ಪೆರುಗತ್ತಿಯಂ ತೋಲಕಾಪ್ರಿಯಂ', ತೊಲಗಾಪ್ಪಿಯಂ', 'ತೋಳ್ಕಾಪ್ಪಿಯನ್', 'ತೊಲ್ಲಾಪಿಯನ್', 'ನನ್ನೂಲ್', 'ಭಾವನಂದಿ', 'ಮೇಲೆಲುತ್ತ್' ಮುಂತಾದ - ನಾಮ ನಿರ್ದೇಶನ ಮಾತ್ರಗಳಲ್ಲಿಯೂ ಕಾಣಬಹುದು. ಇವುಗಳ ವಿಚಾರವಾಗಿ ತಿಳಿಯಹೊಱಟು ಒಂದು ಹೆಜ್ಜೆ ಮುಂದೆ ಸಾಗಿದರೆ-ಆ ಹೆಸರುಗಳು : ಪೇರಗತ್ತಿಯನ್, ತೊಲ್ಕಾಪ್ಪಿಯನ್, ನನ್ನೂಲ್, ಪವಣನ್ದಿ,[1] ಮೆಯ್ಯೆೞುತ್ತು ಎಂಬ-ಕೃತಿಕರ್ತೃಶಬ್ದಗಳ ನಿಜ ನಾಮಗಳನ್ನೇ ಹೇೞಹೊಱಟವೆಂಬುದು ಬಲ್ಲವರಿಗೆ ತಿಳಿಯದಿರದು. ಅಂತು, ಆ ಕೃತಿಕರ್ತೃಶಬ್ದ ನಿಜನಾಮಗಳ ಅಱಿವು ಮತ್ತೊಂದು ಹೆಜ್ಜೆಯನ್ನು ತಾನಾಗಿ ಇಡಿಸಿ, ನಮ್ಮನ್ನು ಆ ಶಾಸ್ತ್ರಾಲೋಕದ ಕಡೆಗೆ ಸೆಳೆದೊಯ್ದು ನಡೆಯಿಸಿದ ನಡಿಗೆಯ ಜಾಡೇ ಇಲ್ಲಿ ಮುಂದುವರಿದಿದೆ.

2. ಕನ್ನಡ ಹಾಗೂ ತಮಿೞು ಒಂದೇಬುಡಕಟ್ಟಿನ ಭಾಷೆಗಳು. ಇವೆರಡು ಭಾಷೆಗಳ ಲಕ್ಷಣವನ್ನು ತಿಳಿಸುವಲ್ಲಿ ಕೇಶಿರಾಜ ಅಂತೆಯೇ ಪವಣಂದಿ ಎಂಬ ಲಾಕ್ಷಣಿಕರು ಹೆಸರಾಂತವರು. ಕನ್ನಡದ ಕೇಶಿರಾಜ ಹಾಗೂ ತಮಿೞಿನ ಪವಣಂದಿ ಒಂದೇ ಶತಮಾನದಲ್ಲಿ ಹುಟ್ಟಿ ಬಾೞಿಬೆಳಗಿದವರು ; ತಮ್ಮ ಕಾಲಕ್ಕೂ ಹಿಂದಿನ ಹಿರಿಯ ಸಾಹಿತ್ಯವನ್ನು ಅಭ್ಯಸಿಸಿದವರು ; ಸಂಸ್ಕೃತದಲ್ಲೂ ಬಲ್ಲಿದರು ; ಮೇಲಾಗಿ ಇಬ್ಬರೂ ಶಬ್ದಶಾಸ್ತ್ರಗ್ರಂಥಕರ್ತರು. ಅವರಿಬ್ಬರ ಗ್ರಂಥಗಳೂ ಅವರವರ ಭಾಷೆಗಳಲ್ಲಿ ವಿಶಿಷ್ಟ ಸ್ಥಾನಮಾನಗಳನ್ನು ಗಳಿಸಿಕೊಂಡಿವೆ. ಅವರಿಬ್ಬರ-ಧರ್ಮ, ವ್ಯಕ್ತಿತ್ವ, ಭಾಷೆಯ ಸಂಬಂಧ, ಅಂದಿಗೆ ಆ ಭಾಷೆಗಳಲ್ಲಿ ಆಗಿದ್ದ ಮಾರ್ಪಾಟು, ಅದಕ್ಕೆ ಅವರು ತಳೆದ ನಿಲವು, ಧ್ಯೇಯಧೋರಣೆಗಳು, ಹೇೞುವ ಶಾಸ್ತ್ರವಿಚಾರ ಹಾಗೂ ಅವುಗಳ ಬೆಳವಣಿಗೆ, ತೌಲನಿಕ ಅಧ್ಯಯನದ ಅಱಿವು ದೊರಕಬೇಕಾದರೆ ಆ ಗ್ರಂಥಗಳ ಪರಸ್ಪರ ಹೊಲಿಕೆ ಸಾಧ್ಯವಾಗಬೇಕು.

3. ನನ್ಮೈ ಎನ್ನುವ ನುಡಿಯೂ ನೂಲ್ ಎನ್ನುವ ನುಡಿಯೂ ಸೇರಿ ನನ್ನೂಲ್ ಎಂದಾಯಿತು. ತಮಿೞಿನ ನನ್ಮೈ ಕನ್ನಡದ ನಲ್ಮೆಗೆ ಸಮ. ನೂಲ್ ಎನ್ನುವುದು ಎರಡೂ ಭಾಷೆಗಳಲ್ಲಿ ತಂತುಮಾತ್ರವನ್ನು ಸೂಚಿಸಿದರೂ ತಮಿೞಿನಲ್ಲಿ ಅದಕ್ಕೆ ಶಾಸ್ತ್ರಗ್ರಂಥವೆನ್ನುವ ವಿಶೇಷಾರ್ಥವಿದೆ. ನೂಲ್ ಎನ್ನುವ ಸಾಧನ ಎರಡು ಬಗೆಯಾಗಿದೆ : ಒಂದು ಮಟ್ಟನೂಲು ಮತ್ತೊಂದು ಬಟ್ಟೆನೂಲು. ಮಟ್ಟನೂಲು ಮರದ ಡೊಂಕನ್ನು ಹೋಗಲಾಡಿಸುವಂತಹದು. ಬಟ್ಟೆನೂಲು ಕದಿರಹೆಣ್ಣೊಬ್ಬಳ ಕೈಚಳಕದಿಂದ ಎೞೆದ ಎೞೆಯಾಗಿ ನೂತು, ಆ ಮೇಲೆ ನೆಯ್ದು ಬಟ್ಟೆಯಾಗಿ ಮಾನವನ್ನು ಕಾಪಾಡುವಂತಹದು. ಇವುಗಳಂತೆ ಅಱಿವುನೂಲೂ ಮನದ ಡೊಂಕನ್ನು ಹೋಗಲಾಡಿಸಿ ಅಱಿವನ್ನು ನೇರಾಗಿಸುವುದು ; ಮೇಲಾಗಿ, ಕವಿಯೇ ಕದಿರಕನ್ನಿಕೆಯಾಗಿ ಕೊಱತೆಯಿಲ್ಲದ ಬಾಯೇ ಕೈಯಾಗಿ. ಸೊಲ್ಲುಗಳೇ ಹಂಜಿಯಾಗಿ, ಕಾವ್ಯಪ್ರವೃತ್ತಿಯೇ ಎೞೆಯಾಗಿ, ಅಱಿವೇ ನೂಲುವ ರಾಟೆಯಾಗಿ, ನುಲಿದ ನೂಲೇ ನೆಯ್ದು, ಶುಭ್ರವಸ್ತ್ರವೆಂಬ ಸಾಹಿತ್ಯವಾಗಿ, ಮಾನವ ಸಮುದಾಯಕ್ಕೆ ಮಾನಸನ್ಮಾನವನ್ನು ತರುವಂತಹದು. ಅಂತಹ ಸಾಹಿತ್ಯದ ಲಕ್ಷಣಗಳನ್ನು ಪಿಂಡವಾಗಿ ಅಡಕಿ–ಸೂತ್ರ, ಪ್ರಕರಣ, ಅಧಿಕಾರಗಳೆಂಬ ಅವಯವತ್ರಯಗಳಲ್ಲಿ ಅಳವಡಿಸಿ-ಹೇೞುವಂತಹುದು. ಮೇಲಾದ ನೂಲಾಗುತ್ತದೆ. ಇಂತಹ ನಲ್ಮೆಯೇ ತನ್ಮೆಯಾಗುಳ್ಳ ಚೆನ್ದಮಿೞ ನೂಲೊಂದಿದೆ ;ಅದೇ ನನ್ನೂಲ್.

4. ಹೀಗೆ, ನೂಲ್ ಎನ್ನುವುದು ಅಱಿವಿನ ಸಾಹಿತ್ಯದ ಉಪಮೆಯ ಆಗುಹೆಸರಾಗಿ ಎಲ್ಲ ಗ್ರಂಥಸಾಮಾನ್ಯವನ್ನೂ, ಮೇಲ್ನೂಲ್ ಎನ್ನುವುದು ಎಲ್ಲ ಶಾಸ್ತ್ರಗ್ರಂಥವನ್ನೂ, ನನ್ನೂಲ್ ಎನ್ನುವುದು ತಮಿೞ ಭಾಷಾವಿಜ್ಞಾನಿಗಳೊಬ್ಬರಿಂದ ರಚಿತವಾದ ಶಬ್ದಶಾಸ್ತ್ರಗ್ರಂಥವೊಂದಱ ಹೆಸರನ್ನೂ ಕುಱಿತುದಾಗಿದೆ. ಈ ಗ್ರಂಥದ ಕರ್ತೃ, ಕಾಲ, ಅಲ್ಲದೆ ವಿಷಯಗಳ ಬಗೆಗೆ ತಿಳಿಯುವ ಮೊದಲು ಇದಱ ಪೂರ್ವೋತ್ತರಕೃತಿಗಳ ಹಾಗೂ ವ್ಯಾಕೃತಿಗಳ ಉಲ್ಲೇಖ ಈ ಗ್ರಂಥದಲ್ಲಿ ಅಲ್ಲಲ್ಲಿ ಬರುವುದಱಿಂದ ಅವುಗಳಿಗೆ ಹೊಂದಿಕೊಂಡಿರುವ ಕೆಲವು ವಿಚಾರಗಳನ್ನು ತಿಳಿಯುವುದು ಆವಶ್ಯಕ :

5. ಪುರಾತನ ತಮಿೞುನಾಡು ಇಂದಿಗಿಂತ ಬಹಳ ವಿಶಾಲವಾಗಿತ್ತು. ನಾಡಿನ ವಿದ್ವಾಂಸರು ಅಲ್ಲಲ್ಲಿ ಸಭೆ ಸೇರುತ್ತಿದ್ದರು. ಇಂತಹ ವಿದ್ವತ್ಸಭೆಗಳಿಗೆ 'ಸಙ್ಗಮ್' ( - ಜಂಗುಱಿ : ಸಂಘ) ಎಂದು ಹೆಸರು. ಸಂಘಗಳಲ್ಲಿ ದಕ್ಷಿಣ ಮಧುರೆಯ ಮಹಾಸಂಘವೇ ಮೊದಲೂ ಮೇಲೂ ಆದುದು. ತಮಿೞನಾಡು ಒಳಗಾದ ಮೊದಲನೆಯ ಜಲಪ್ರಳಯದಲ್ಲಿ ದಕ್ಷಿಣ ಮಧುರೆಯೂ ಎರಡನೆಯ ಜಲಪ್ರಳಯದಲ್ಲಿ ಎರಡನೆಯ ಮಹಾಸಂಘವಿದ್ದ ಕಪಾಟಪುರವೂ ಕಡಲಿನಲ್ಲಿ ಮುೞುಗಿದವು. ರಾಮಾ

ಯಣದಲ್ಲಿ ಈ ಕಪಾಟಪುರವನ್ನು ವಾಲ್ಮೀಕಿ ನೆನೆದಿದ್ದಾನೆ. ಮೂಱನೆಯ ಮಹಾ ಸಂಘವು ಈಗಿನ ಮಧುರೆಯಲ್ಲಿ ಬೆಳಗಿತ್ತು ; ಈ ಸಂಘ ಹಾಗೂ ಸಂಘಪೂರ್ವದ ಮೇಲ್ತರದ ಭಾಷಾಭಂಡಾರವೇ ಚೆನ್ದಮಿೞ ಸಾಹಿತ್ಯವಾಗಿದೆ. ಇದೇ ಲಕ್ಷಣ ಗ್ರಂಥಗಳ ಲಕ್ಷ್ಯ. ಲಕ್ಷ್ಯ ಬೆಳಗುವ ದೀಪವಾದರೆ ಲಕ್ಷಣ ಅದಱ ದೀಪ್ತಿ. ದೀಪ್ತಿ ದೀಪದ ಎಡೆಯಲ್ಲಿ ನಿಂತು ವಸ್ತುವಿನ ಇರವನ್ನು ಅಱಿವಿಗೆ ಗೋಚರಿಸುವಂತೆ, ಲಕ್ಷ್ಯಗಳ ಎಡೆಯಲ್ಲಿ ಲಕ್ಷಣವು ನಿಂತು ಹುರುಳಿನ ತಿರುಳನ್ನು ತಿಳಿಸುತ್ತದೆ. ಎಳ್ಳಿಂದ ತೆಗೆದುದು ಎಣ್ಣೆ ಎನಿಸುವಂತೆ, ಲಕ್ಷ್ಯದಿಂದ ತೆಗದುದು ಲಕ್ಷಣವೆಂದು ತಿಳಿಸುತ್ತದೆ : 'ಅಗತ್ತಿಯಮ್' ಎನ್ನುವ ಲಕ್ಷಣಗ್ರಂಥ. ಬಲ್ಲವರು ಹಲವು ಲಕ್ಷ್ಯಗಳನ್ನು ಆರಯ್ದು, ಒಂದುಗೂಡಿಸಿ ಒಳಗೊಂಡು, ಬಹುವಾಗಿ ಹೋಲುವವುಗಳನ್ನೆಲ್ಲ ಚೆನ್ನಾಗಿ ಹೊಂದುವ ಲಕ್ಷಣವಾಗುವಂತೆ ತಂದರು. ಅಂತಹ ಬಲ್ಲವರಲ್ಲಿ ಮೊದಲನೆಯ ಸಂಘ ಕಾಲಕ್ಕೆ ಸೇರಿದ ಅಗಸ್ತ್ಯರು ಮೊದಲಿಗರು. ಅವರು ಚೆನ್ದಮಿೞ ಸಾಹಿತ್ಯ ಕಡಲನ್ನು ಮತಿ ಮಂತಿನಿಂದ ಕಡೆದು ತಂದ ಬೆಣ್ಣೆಯೇ ಅಗತ್ತಿಯಮ್.[2] ಇದಕ್ಕೆ 'ಪೇರಗತ್ತಿಯಮ್'[3] (=ಹೇರಗತ್ತಿಯಂ, ಬೃಹದಗಸ್ತ್ಯಮ್) ಎನ್ನುವ ಮತ್ತೊಂದು ಹೆಸರೂ ಉಂಟು. ಇದಱ ಸೂತ್ರಪರಿಮಾಣ ೧೨,೦೦೦. ಇದು ಸಾಹಿತ್ಯ ಲಕ್ಷಣವನ್ನಲ್ಲದೆ–ರಾಜತಂತ್ರ, ಜ್ಯೋತಿಷ್ಯ, ಗಾಂಧರ್ವ, ನಾಟ್ಯ ಇತ್ಯಾದಿ–ಹಲವು ಶಾಸ್ತ್ರಗಳನ್ನು ಹೊಂದಿತ್ತೆಂದು ಆ ಮೇಲಿನ ಗ್ರಂಥನಿರೂಪಕರಿಂದ ತಿಳಿಯುತ್ತದೆ ; ಈ ಗ್ರಂಥ ಈಗ ದೊರಕದು. ಎರಡನೆಯ ಸಂಘ ಕಾಲದಲ್ಲಿ ಮತ್ತೊಬ್ಬ ಅಗಸ್ತ್ಯರಿದ್ದರು ; ಇವರು ರಚಿಸಿದ ಗ್ರಂಥ ಸಾಹಿತ್ಯಕ್ಕೆ ಮಾತ್ರ ಸಂಬಂಧಿಸಿ ಸಿಟ್ಟಗತ್ತಿಯಮ್ (=ಚಿಟ್ಟಗತ್ತಿಯಮ್ ; ಕಿಂಚಿದ ಗಸ್ತ್ಯಂ) ಎಂದು ಹೆಸರಾಗಿದೆ. ಇದು ತಮಿೞ ಸಾಹಿತ್ಯವನ್ನು ಕಾವ್ಯ, ಸಂಗೀತ, ನಾಟಕ ಎಂದು ಮುಪ್ಪಾಲು ಮಾಡಿದೆ. ಇವರ ಶಿಷ್ಯರು ಹನ್ನೆರಡು ಮಂದಿ ; ಈ ಶಿಷ್ಯರು ಬಾೞ್ ಬೆಳಗುವ ಕಾಲಕ್ಕೆ ಒಬ್ಬೊಬ್ಬರು ಒಂದೊಂದು ಪಡಲ (=ಹಲ ಹುರುಳೋದು : ಪಟಲ) ಗಳಂತೆ ಹನ್ನೆರಡುಪಟಲಗಳ ಪನ್ನಿರುಪಡಲಮ್ ಎನ್ನುವ ಬಹಿರ್ವಸ್ತು ಲಕ್ಷಣಗ್ರಂಥವನ್ನು ತಂದರು. ಇದಱ ಮಾರ್ಗಗ್ರಂಥವಾದ ಪುಱ ಪ್ಪೊರುಳ್ ವೆಣ್ಬಾಮಾಲೈ ಮಾತ್ರ ಈಗ ದೊರಕುತ್ತದೆ. ಪರಂಪರಾನುಗತ ಅಭಿ ಪ್ರಾಯದಂತೆ ತೊಲ್ಕಾಪ್ಪಿಯರ್[4] ಅಗಸ್ತ್ಯರ ಶಿಷ್ಯಪ್ರಥಮರು ; ಬಡಗುಭಾಷೆಯ ಪಾಣಿನಿಯ ಕಾಲಕ್ಕೂ ಹಿಂದಿನವರು. ಇವರ ಕಾಲ ; ಬಹುತೇಕ ಕ್ರಿ.ಪೂ. ಐದನೆಯ ಶತಮಾನವೆಂದು ಒಪ್ಪಿದುದಾಗಿದೆ. ಇವರು ರಚಿಸಿದ ಲಕ್ಷಣಗ್ರಂಥ ತೊಲ್ಕಾಪ್ಪಿಯಮ್[5] ಎಂದು ಹೆಸರಾಗಿದೆ. ಈಗ ದೊರಕುವ ತಮಿೞ ಲಕ್ಷಣ ಗ್ರಂಥಗಳಲ್ಲಿ ಹೞೆಯದೂ ತಿಳಿಯಾದುದೂ ಮೇಲಾದುದೂ ನೆಱೆದುದೂ ಇದೊಂದೇ ; ತಮಿೞ ಸಾಹಿತ್ಯ ಲಕ್ಷಣವನ್ನು ಎೞುತ್ತು (=ಬರಹ, ಅಕ್ಕರ : ಅಕ್ಷರ), ಸೊಲ್ (=ಸೊಲ್, ಸೊಲ್ಲು ; ಶಬ್ದ), ಪೊರುಳ್ (=ಪುರುಳ್, ಹುರುಳ್ ; ವಸ್ತು)

ಎಂಬ ಮೂಜಧಿಕಾರಗಳಲ್ಲಿ ಹೇಱುತ್ತದೆ ; ಒಂದೊಂದು ಅಧಿಕಾರವೂ ಒಂಬೊಂಬತ್ತು ಪ್ರಕರಣಗಳನ್ನು ಹೊಂದಿ, ೧೬೦೨ ಸೂತ್ರಗಳನ್ನು ಒಳಗೊಂಡಿದೆ. ವಸ್ತು ಲಕ್ಷಣಗಳನ್ನು ಕುಱಿತು ಹೇಱುವ ಪೊರುಳ್ ಅಧಿಕಾರ ಬೇಱಾವಭಾಷೆಯಲ್ಲೂ ತೋಱದು. ಈ ಗ್ರಂಥಕರ್ತೃವಿನ ಕಾಲಕ್ಕೆ ತಮಿೞ್‌ನಾಡಿನಲ್ಲಿ ೨೦ ಬಗೆಯ ಹಾಡಿನ ಧಾಟಿಗಳು ಬೞಕೆಯಲ್ಲಿದ್ದವು. ಇಂದಿನ ಯುಗದ ಭಾಷಾವಿಜ್ಞಾನಿಗಳೂ ಮೆಚ್ಚಿ ಅಚ್ಚರಿಪಡುವಂತಹ ಗ್ರಂಥ ಇದಾಗಿದೆ. ತೊಲ್ಕಾಪ್ಪಿಯರ ಕಾಲಪ್ರಜ್ಞೆಗೆ ಅವರ 'ಕಡಿಸೊಲ್ ಇಲ್ಲೈ ಕಾಲತ್ತುಪ್‌ಪಡಿನೇ' (='ಕಾಲದ ಮಾಱ್ಪಾಟಿಗೆ ತಕ್ಕಂತೆ ತೋಱಿ ಹಲವು ಸೊಲ್ಲುಗಳು ಬೞಕೆಗೆ ಬಂದರೆ, ಇವು ಹೞಯ ಸೊಲ್ಲುಗಳಲ್ಲದುದಱಿಂದ ಸಲ್ಲದೆಂದು ತಳ್ಳಬಾರದು) ಎನ್ನುವ ೯೩೫ನೆಯ ಸೂತ್ರವೇ ಸಾಕು. ಬಹುಕಾಲ ಬೆಳಗಿದ ಈ ಗ್ರಂಥಕ್ಕೂ ಗ್ರಹಣಕಾಲವೊಂದೊದಗಿತು. ಅದಕ್ಕೆ ಪ್ರತಿಯಾಗಿ ಪ್ರಚಾರಕ್ಕೆ ಬಂದ ಮತ್ತೊಂದು ಗ್ರಂಥವೆಂದರೆ ಅವಿನಯಮ್ (=ಅವಿಚುನವಿರು, ಅಡೆನಯು ; ನಿಗೂಹನನಯಮ್). ಇದು ಶಬ್ದಶಾಸ್ತ್ರ ಮತ್ತು ಛಂದಸ್ಸನ್ನು ಕುಱಿತದ್ದು. ಇದಱ ಕರ್ತೃ ಅವಿನಯನಾರ್.[6] ಈ ಗ್ರಂಥ 'ರಾಜಪವಿತ್ತಿರ ಪಲ್ಲವದರೈಯಾನ್' ಎಂಬ ಪಲ್ಲವ ಮಂಡಲಾಧಿಪತಿಯಿಂದ ವ್ಯಾಖ್ಯಾನಿತವಾಗಿದ್ದುದಾಗಿ ತಿಳಿಯುತ್ತದೆ. ಈ ಗ್ರಂಥವಾಗಲೀ ಇದಱ ವಾಖ್ಯಾನವಾಗಲೀ ಈಗ ದೊರಕದು ; ಆದರೆ ಅವಿನಯನಾರ್‌ರ ೬೨ ಸೂತ್ರಗಳು ಮಾತ್ರ ಅಲ್ಲಲ್ಲಿ ದೊರಕುತ್ತಿವೆ. ಅವಿನಯನಾರ್ ತಮ್ಮ ಕಾಲಕ್ಕೆ ಬೞಕೆಯಲ್ಲಿದ್ದ ೧೧೦ ಬಗೆಯ ಹಾಡಿನ ಧಾಟಿಗಳನ್ನು ಗುಱುತಿಸಿದ್ದಾರೆ. ಆ ಕಾಲಕ್ಕಾಗಲೇ ಅವರು ಜನಪದ (=ಜನರ ಹಾಡು)ಗಳ ಕವಿತಾಗುಣವನ್ನು ಮೆಚ್ಚುವುದಲ್ಲದೆ ಉದಾಹರಿಸಿರುವುದನ್ನೂ 'ಯಾಪ್ಪರುಙ್ಕಲಮ್'.[7] ಎನ್ನುವ ಛಂದೋಗ್ರಂಥ ಎತ್ತಿಹಿಡಿದಿದೆ. ಈ ಗ್ರಂಥವೂ ತನ್ನ ಅಂಗವಾದ ಅಕ್ಷರಪ್ರಕರಣವನ್ನು ಒಳಗೊಂಡಿದೆ. ಈ ಗ್ರಂಥ ಕ್ರಿ.ಶ. ಸು. ೧೦ನೆಯ ಶತಮಾನಕ್ಕೆ ಸೇರಿದುದು : ಕಾರಿಗೈ, [ಕಾಱಗೆ, (ಕಾಡಿಗೆ, ಕಾಣ್ಡಿಗೆ) ಕಾಱಕೆ : ಕಾರಿಕೆ] ವೃತ್ತಿ (ವಿಱುತ್ತಿ <ವಿಱು + ಉತ್ತಿ, ವಿರಿಯುತ್ತಿ <ವಿರಿ + ಉತ್ತಿ) ಗಳೆನ್ನುವ ಸಂಕ್ಷಿಪ್ತ ಹಾಗೂ ವಿಸ್ತೃತವಾದ ಎರಡು ರೂಪಗಳಲ್ಲಿ ಈಗಲೂ ಈ ಗ್ರಂಥ ದೊರೆಯುತ್ತಿದೆ.

6 ಅವಿನಯನಾರ್ ಮತ್ತು ಯಾಪ್ಪರುಙ್ಕಲಮ್ ಗ್ರಂಥಗಳ ನಡುವಣ ಕಾಲಕ್ಕೆ ತೊಲ್ಕಾಪ್ಪಿಯಕ್ಕೆ ಸಾವಿರದ ಐನೂಱು ವರುಷಗಳು ತುಂಬಿತ್ತು. ಅದಱ ಶಬ್ದಶಾಸ್ತ್ರಪ್ರಯೋಗಗಳು ಬಹುವಾಗಿ ಸಂಘ ಕಾಲದ ಸಾಹಿತ್ಯವನ್ನು ಅನುಸರಿಸಿದ್ದರೂ ಅದಕ್ಕೆ ಒಪ್ಪಿತವಲ್ಲದ, ಕೊನೆಗೆ ಅದು ನಿಷೇಧಿಸಿರುವ ಅನೇಕ ಬೞಕೆಗಳು ಸಂಘದ ಸಾಹಿತ್ಯದಲ್ಲಿದ್ದುವು. ಅದಲ್ಲದೆ, ಅನುಮೋದಿತವಾದ ಹಲವು ಸಂಘ ಸಾಹಿತ್ಯದ ಹಾಗೂ ಆ ಗ್ರಂಥಕಾಲದ ಬೞಕೆಗಳು ಆ ಮೇಲೆ ವಾಡಿಕೆಯಿಂದ ತಪ್ಪಿಕೊಂಡವು.

ಕೆಲವು ಅಪರೂಪದ ಬಳಿಕೆಗಳು ತಕ್ಕವಲ್ಲವಾದರೂ ಬಹುಕಾಲದ ಬಳಿಕೆಯಿಂದಾಗಿ ಆ ಗ್ರಂಥದೊಳಗೆ ಸೇರಿದ್ದವು. ಇವರಿಂದ ತೊಲ್ಕಾಪ್ಪಿಯಮ್ ರಚಿತವಾದ ಕಾಲಕ್ಕೂ ಸಂಘ ಸಾಹಿತ್ಯ ಕಾಲಕ್ಕೂ ಕೆಲವು ಶತಮಾನಗಳ ಅಂತರವಿದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಅದರ ಗ್ರಹಣ ಕಾಲಕ್ಕೆ ಸಂದ ಸಾವಿರ ವರುಷಗಳಲ್ಲಿ ತಮಿಳುಭಾಷೆಗೆ ಸಾಕಷ್ಟು ಬದಲಾವಣೆಗಳಾಗಿದ್ದುವು. ತೊಲ್ಕಾಪ್ಪಿಯಮ್ ಅದರ ಕರ್ತೃವಿನ ಹೆಸರ ಬಲದಿಂದ ಹಿರಿದೆನಿಸದೆ, ತಮಿಳು ಮತ್ತು ಅದರ ರಚನೆಯ ಬಗೆಗೆ, ಅಂದಿನಿಂದ ಇಂದಿನವರೆಗೂ ಕುಂದದ ಕರ್ತೃವಿನ ಆಳವಾದ ವಿವೇಚನೆ ಹಾಗೂ ಪ್ರಜ್ಞೆಯಿಂದ ಹಿರಿಯ ಗ್ರಂಥವಾಗಿದೆ. ಅದು ಚಿರನೂತನವಾಗುಳಿಯಲು ವಿವರಣಾತ್ಮಕ ವ್ಯಾಖ್ಯಾನ ಆವಶ್ಯಕವಾಯಿತು. ತೊಲ್ಕಾಪ್ಪಿಯಕ್ಕೆ ಉಂಟಾಗಿ ದೊರೆಯುವ ವ್ಯಾಖ್ಯಾನಗಳಲ್ಲಿ ಇಳಮ್ಪೂರಣರ ವ್ಯಾಖ್ಯಾನವೇ ಮೊದಲಿನದು. ಇವರ ಕಾಲ : ಕ್ರಿ.ಶ.ಸು. ೯ನೆಯ ಶತಮಾನ. ಅದರಿಂದೀಚಿನ ಪೇರಾಸಿರಿಯರ್, ಸೇನಾವರೈಯಾರ್, ಕಲ್ಲಾಡರ್, ನಚ್ಚಿನಾರ್ಕ್ಕಿನಿಯರ್, ತೆಯ್ವಚ್ಚಿಲೈಯಾರ್ ಮೊದಲಾದವರು ತೊಲ್ಕಾಪ್ಪಿಯದ ಹಿರಿಯ ವ್ಯಾಖ್ಯಾತೃಗಳು. ಇವರೆಲ್ಲ, ತೊಲ್ಕಾಪ್ಪಿಯವನ್ನು ತಂತಮ್ಮ ಕಾಲದ ಮಾರ್ಪಾಡುಗಳನ್ನು ವಿವರಿಸಲು ಶಕ್ಯವಾಗುವಂತೆ, ಇಂದಿನ ಮೇಲ್ಮಟ್ಟದ ಅಧ್ಯಯನಕ್ಕೆ ತಕ್ಕುದಾಗಿ ತಮಿಳುಪ್ರಪಂಚದಲ್ಲಿ ಶ್ರೇಷ್ಠ ಪ್ರಭುತ್ವಗ್ರಂಥವಾಗುವಂತೆ, ಪುನಶ್ಚೇತನಗೊಳಿಸುವ ಕಾರ್ಯದಲ್ಲಿ ಯಶಸ್ವಿಗಳಾಗಿದ್ದಾರೆ.

7. ತಮಿಳುಶಬ್ದಶಾಸ್ತ್ರದಲ್ಲಿ ಅವಿನಯನಾರ್‌ರ ಗ್ರಂಥಾನಂತರ ತೊಲ್ಕಾಪ್ಪಿಯದ ಐದು ಲಕ್ಷಣಗಳನ್ನೂ ಉಳ್ಳದಾಗಿ ಈಗಲೂ ದೊರಕುವ ಮತ್ತೊಂದು ಗ್ರಂಥವೆಂದರೆ : ವೀರಸೋಳಿಯಮ್. ಇದು ವೀರಚೋಳನ ಹೆಸರಿನ ಮೇಲೆ ತಂದ ಗ್ರಂಥವಾಗಿದೆ. ಈ ವೀರಚೋಳನು ಮತ್ತಾರೂ ಅಲ್ಲದ ಒಂದನೆಯ ರಾಜೇಂದ್ರಚೋಳನ ಮಗನೇ ಆಗಿದ್ದಾನೆ. ಈತನ ಆಳಿಕೆಯ ಕಾಲ ಕ್ರಿ. ಶ. ೧೦೬೩-೧೦೭೦. ಈ ಗ್ರಂಥಕರ್ತೃವಾದ ಬುದ್ಧಮಿತ್ರನು ಪೊನ್ಪಟ್ಟಿ ಎಂಬ ನಾಡಿನ ಕಿರಿಯರಸ. ಈತನ ಅನುಯಾಯಿ ಪೆರುನ್ದೇವನಾರ್ (ಕ್ರಿ. ಶ. ೧೧೭೦-೧೧೩೩) ಬುದ್ಧಮಿತ್ರನ ವೀರಸೋಳಿಯಮ್‌ಗೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ಈ ಗ್ರಂಥ-ಎಳುತ್ತು, ಸೊಲ್, ಪೊರುಳ್, ಯಾಪ್ಪು (=ಕಟ್ಟು ; ಛಂದ), ಅಣಿ (=ಅಣಿ, ಒಸಪು ; ಅಲಂಕಾರ) ಎನ್ನುವ ಐದು ಭಾಗಗಳನ್ನು ಒಳಗೊಂಡಿದೆ. ಇದರ ಸೂತ್ರವ್ಯಾಪ್ತಿ, ಪೀಠಿಕೆಗೆ ೩ ; ಪಂವಿಡಿಯಿಂದ ಆ ಐದೂ ಭಾಗಗಳಿಗೆ, ೨೮, ೫೫, ೨೧, ೩೬, ೪೧. ಆಗ ಮೊತ್ತ, ೧೮೪ ಅಷ್ಟೆ. ಆ ಗ್ರಂಥದಲ್ಲಿನ ‘ಮೊನ್ನ ಮಿಲಾ’ ‘ಅವುದ್ ಆಗರಮ್ಮ’ ಎನ್ನುವ ಮೊದಲ ಕುರುಳಿನ ಸೂತ್ರಗಳಿಂದ ಸಂಸ್ಕೃತ ಸಂಧಿಯನ್ನು ಕುರಿತಿರುವುದಲ್ಲದೆ ಸಂಸ್ಕೃತದ ವ್ಯಾಕರಣಪರಿಭಾಷೆಯನ್ನು ಒಳಗೊಂಡಿದೆ. ಈಗಲೂ ದೊರಕುವ ನೇಮಿನಾದಮ್ ಎನ್ನುವ ಗ್ರಂಥವಲ್ಲದೆ ಬೇರಾವ ಗ್ರಂಥವೂ ಇದನ್ನು ಅನುಸರಿಸಿಲ್ಲ.

8 ನೇಮಿನಾದಮ್ ಗ್ರಂಥವ್ಯಾಖ್ಯಾತೃವಿನ ಪ್ರಕಾರ ಇದರ ಕರ್ತೃ ಗುಣವೀರಪಣ್ಡಿತರ್. ಇಪ್ಪತ್ತೆರಡನೆಯ ತೀರ್ಥಂಕರ ನೇಮಿನಾದರ ಹೆಸರಿನ ಮೇಲೆ ಈ ಗ್ರಂಥ ರಚಿತವಾಗಿದೆ. ವಚ್ಚಣನ್ದಿಮಾಲೈ ಎನ್ನುವ ಛಂದೋಗ್ರಂಥವ್ಯಾಖ್ಯಾತೃವಿನ ಪ್ರಕಾರ ಈ ಗ್ರಂಥವು ಗುಣವೀರಪಣ್ಡಿತರಿಂದ ರಚಿತವಾಗಿ ಇವರ ವಿದ್ಯಾಗುರು ವಚ್ಚಣಂದಿಯವರ ಹೆಸರಿನ ಮೇಲೆ ತಂದುದಾಗಿ ತಿಳಿಯುತ್ತದೆ. ಈ ಗ್ರಂಥ ತ್ರಿಭುವನದೇವರ್ ಅಂದರೆ ಮೂರನೆಯ ಕುಲೋತ್ತುಂಗನ ಆಳಿಕೆಯ ಕಾಲದಲ್ಲಿ (ಕ್ರಿ. ಶ. ೧೧೭೮ ೧೨೧೭-೧೮) ರಚಿತವಾದುದಾಗಿದೆ. ಇದು ಅಕ್ಷರಾಧಿಕಾರವನ್ನೂ ಶಬ್ದಾಧಿಕಾರವನ್ನೂ ಹೊಂದಿದ ಲಕ್ಷಣಗ್ರಂಥವಾಗಿದೆ. ನೇಮಿನಾದಮ್ ಗ್ರಂಥ ಅಕ್ಷರಾಧಿಕಾರಕ್ಕೆ ಸಂಬಂಧಿಸಿದ ಹಾಗೆ ವೀರಸೋಳಿಯಮ್ ಅನ್ನು ವಿಷಯಕ್ರಮನಿಯಮಗಳಲ್ಲಿ ಬಹುವಾಗಿ ಅನುಸರಿಸಿದೆ. ಸೊಲ್ಲಧಿಕಾರಕ್ಕೆ ಸಂಬಂಧಿಸಿದ ಹಾಗೆ -'ತೊಲ್ಕಾಪ್ಪಿಯಕ್ಕಡಲಿಳ್ ಸೊಟ್ಟೀವಚ್ ಚುಟ್ಟುಳಕ್ಕ ಪಲ್ಕಾಲಿತ್ತೋಣ್ಡೋಡುಮ್ ಪಡಗೆನ್ನ....' ಅಂದರೆ ತೊಲ್ಕಾಪ್ಪಿಯವೆಂಬ ಕಡಲೊಳಗಣ ಸೊಲ್ಲೆಂಬ ದಿಬ್ಬವನ್ನು ಸುತ್ತಿ ಆಳೆಯಲು ಕೆಲಕಾಲ ನಿಡುಪಯಣಗೊಂಡ ಪುಟ್ಟ ಹಡಗು ಎಂದು ತನ್ನ ವಿಶಿಷ್ಟಪೀಠಿಕೆಯಲ್ಲಿ ತನ್ನನ್ನು ತಾನು ಕರದುಕೊಂಡಿದೆ.

9 ಈ ಗ್ರಂಥದ ಅಕ್ಷರ ಹಾಗೂ ಶಬ್ದಾಧಿಕಾರಗಳ ಮೊದಲಲ್ಲಿನ ಸ್ತುತಿಯಿಂದಲೂ ಗ್ರಂಥನಾಮದಿಂದಲೂ ಇದರ ಕರ್ತೃ ಸವಣರೆಂದು ತಿಳಿದುಬರುತ್ತದೆ. ಈ ಗ್ರಂಥಸೂತ್ರಗಳೆಲ್ಲ, ದಶಸೌಂದರ್ಯಯುಕ್ತ ವೆಣ್ಬಾ (<ವೆಳ್‌ಪಾ (ತ), ಬೆಳ್ವಾಡು : ಧವಳಗೀತ)ಗಳಿಂದಾಗಿವೆ ; ಅಕ್ಷರಾಧಿಕಾರಕ್ಕೆ ಮೊದಲು ವಿಶಿಷ್ಟ ಪೀಠಿಕೆಯ ವೆಣ್ಬಾಗಳು ೨, ಅವುಗಳನ್ನು ನೆಮ್ಮ ಅಕ್ಷರಾಧಿಕಾರದ ಸ್ವಪ್ರಶಂಸೆಯ ವೆಣ್ಬಾ ೧, ಸಭಾವಿಧೇಯವೆಣ್ಬಾ ೧—ಪೀಠಿಕೆ ಎನ್ನುವ ಹೆಸರಿನಿಂದಿವೆ. ಅಕ್ಷರಾಧಿಕಾರದ-೨೪, ಶಬ್ದಾಧಿಕಾರದ ಮೊದಲಿನ, ಅದೇ ಅಧಿಕಾರದ ಸ್ವಪ್ರಶಂಸೆಯ ವೆಣ್ಬಾ ೧, ಅದನ್ನು ಬಿಟ್ಟು ಶಬ್ದಾಧಿಕಾರದ ವೆಣ್ಬಾಗಳು ೭೦, ಒಟ್ಟು ೯೯ ವೆಣ್ಬಾಗಳು ಗ್ರಂಥಾಂತರ್ಗತ ಸೂತ್ರಗಳಾಗಿವೆ. ಈ ಗ್ರಂಥದ ಮೊದಲ ಅಧಿಕಾರವು ಪ್ರಕರಣಗಳಾಗಿ, ಒಳವಿಂಗಡಿಸಿಕೊಳ್ಳದೆ ಅಕ್ಷರಾಧಿಕಾರವೊಂದೇ ಆಗಿ ನಿಂತಿದೆ. ಇದು ತೊಲ್ಕಾಪ್ಪಿಯವನ್ನು ಆದಿಗ್ರಂಥವಾಗಿಸಿಕೊಂಡು ರಚಿಸಿದ ಗ್ರಂಥ ; ಅದರಂತೆಯೇ ಶಬ್ದಾಧಿಕಾರವನ್ನು ಒಂಬತ್ತಾಗಿ ವಿಂಗಡಿಸಿಕೊಂಡು ಪುಟ್ಟಪ್ರಮಾಣದ ಪ್ರಕರಣಗಳಲ್ಲಿ ತನ್ನ ಹಿಂದಣ ವೀರಸೋಳಿಯಮ್ ಗ್ರಂಥದ ಸಂಸ್ಕೃತಸಂಭಾಷಾವಾಸನೆಯನ್ನು ಹಿಡಿದು ಸಾಗುತ್ತದೆ. ಈ ಗ್ರಂಥಕ್ಕೆ ದೊರೆತಿರುವ ವ್ಯಾಖ್ಯಾನದಲ್ಲಿ ಅರುಂಪ ವೃತ್ತಿಯೂ ತಾತ್ಪರ್ಯ ವೃತ್ತಿಯೂ ಉದಾಹರಣವೂ ಪ್ರಶ್ನೋತ್ತರಗಳೂ ಸೂತ್ರಾರ್ಥವನ್ನು ಬೆಳಗತಕ್ಕ ಪೂರ್ವಗ್ರಂಥಸೂತ್ರೋದ್ಧರಣಗಳೂ, ಹಲವು ಗ್ರಂಥಲಕ್ಷ್ಯೋದಾಹರಣಗಳೂ ಕಾಣಬಂದು ವ್ಯಾಖ್ಯಾತೃವಿನ ವಿದ್ವತ್ತನ್ನು ಚೆನ್ನಾಗಿ ಪ್ರಕಟಿಸುತ್ತದೆಯಾದರೂ ಅವರ

ಬಗೆಗೆ ಏನನ್ನೂ ತಿಳಿಸದು. ಇದು 'ಚೆನ್ನೂಲ್' ಎನ್ನುವ ಇನ್ನೊಂದು ಹೆಸರನ್ನುಳ್ಳದಾಗಿದೆ.

10 ನೇಮಿನಾದರ್ ಗ್ರಂಥಕಾಲಕ್ಕೆ ಹುಟ್ಟಿದ ಆ ಮೇಲಿನ ಮತ್ತೊಂದು ಗ್ರಂಥವೆಂದರೆ : ನನ್ನೂಲ್. ಹೆಸರಿನ ತಿಳಿವಳಿಕೆ ಮೊದಮೊದಲೇ ಆಗಿದ್ದು ಇದರ ಕರ್ತೃ, ಕಾಲ, ಸ್ಥಾನಮಾನ, ವಿಷಯಾನುಕ್ರಮಗಳ ಬಗೆಗೆ ಈಗ ತಿಳಿಯತಕ್ಕುದಾಗಿದೆ. ಹಿರಿಯರಸ ಮೂರನೆಯ ಕುಲೋತ್ತುಂಗನ ನೇರ ಆಳಿಕೆಗೆ ಒಳಪಟ್ಟ ಪ್ರದೇಶದಿಂದ ನೇಮಿನಾದರ್ ರಚಿತವಾದವರೆ, ಅವನ ಕೈಕೆಳಗಿನ ಕಿರಿಯರಸ ಸೀಯಗಜ್ಗ (= ಸಿಂಹದಂತಹ ಗಂಗ)ನ ಬೇಡಿಕೆಯಂತೆ ಅವನ ಆಳಿಕೆಗೆ ಒಳಪಟ್ಟ ಸನಗೈವಾಸಿ ಬವಣಂದಿ ಮುನಿಗಳಿಂದ ನನ್ನೂಲ್ ರಚಿತವಾಯಿತು. ಬವಣಂದಿಮುನಿಗಳು ಸನ್ಮತಿಮುನಿವರರ ಶಿಷ್ಯರು ; ಸವಣತುಱವಿಗಳು. ಇವರ ಕಾಲದೇಶ : ಸೀಯಗಜ್ಗನ ಕಾಲದೇಶವೇ ಆಗಿದೆ. ಬವಣಂದಿಮುನಿವರರ ಊರು : ಸನಗೈ ( = > ಚನಗೈ > ಜನಗೈ > ಜನಕಾ ) ಎಂದು ಈ ಗ್ರಂಥದ ವಿಶಿಷ್ಟ ಪೀಠಿಕೆ ಹೇಳುತ್ತದೆ. ಅವರ ಹುಟ್ಟೂರುತೊಣ್ಡೈಮಣ್ಡಲದಲ್ಲಿಯದೆಂದು ತೊಣ್ಡೈಮಣ್ಡಲಶತಕವೂ [8]ಕೊಜ್ಗಮಣ್ಡಲದಲ್ಲಿಯದೆಂದು ಕೊಜ್ಗಮಣ್ಡಲಶತಕವೂ ಹೇಳುತ್ತದೆ. ಇದಕ್ಕೆ ಕಾರಣ, ಬವಣಂದಿಮುನಿವರರ ಕಾಲದಿಂದ ಈಚೆಗೆ ಆ ಶತಕಗಳು ಉಂಟಾಗಿರುವುದೂ, ಆಯಾ ಮಂಡಲಗಳಲ್ಲಿ ಅದೇ ಹೆಸರನ್ನು ಹೋಲುವ ಊರುಗಳಿರುವುದೇ ಆಗಿದೆ. ಆದರೆ ಈ ಗ್ರಂಥದ ಮೊದಲ ವ್ಯಾಖ್ಯಾತೃಗಳಾದ [9] ಮಯಿಲೈನಾದರ್, ಸನಗೈ ಎನ್ನುವುದು ಜನನಾಥಪುರನೆಂದು ಹೇಳಿರುವುದರಿಂದ ಇದು ಮೈಸೂರು ಜಿಲ್ಲೆಯ ತಿರುಮಕೂಡಲುನರಸೀಪುರ ( = < [10] ನರಸೀಯಪುರ :ನರಸಿಂಹಪುರ)ದ ತಾಲೂಕಿಗೆ ಸೇರಿದ ಗ್ರಾಮವೆಂದೂ, ಅದು ಗಂಗನಾಡಿನಲ್ಲಿ ಕಾವೇರಿಯ ಬಡಗುತಡಿಗೆ ಇರುವುದೆಂದೂ, ಆವೂರಿಗೆ ಮಾಯಿಲಜ್ಗ ಎನ್ನುವ ಮತ್ತೊಂದು ಹೆಸರು ಉಂಟೆಂದೂ ಶಾಸನತಜ್ಞರು ತೀರ್ಮಾನಿಸಿದ್ದಾರೆ. ಗಂಗನಾಡಿನ ಹಳೆಯ ತಲೆನಗರವಾದ ತಲಕಾಡಿಗೂ ಈ ಊರಿಗೂ ನಡುವೆ [11] ಮುಡುಕುವ ತೊಱೆಯಾಗಿ ಹರಿಯುವ ಕಾವೇರಿಯ ಅಱು ಮಾತ್ರ ಇರುವುದರಿಂದ ಬವಣಂದಿ ಮುನಿವರರ ಹುಟ್ಟೂರು, ಮೈಸೂರು ಜಿಲ್ಲೆಗೆ ಸೇರಿದ ಜನನಾಥಪುರವೆಂಬ ಮಾಯಿಲಜ್ಗ ಎನ್ನುವುದು, ಈಗಿನ ಮಾಲಂಗಿಯೇ ಆಗಿದೆಯೆಂದು ತಡಿಮಾಲಂಗಿಯ ಹಲವು ಶಾಸನಗಳಿಂದ [12] ಈ ನನ್ನೂಲ್‌ನೋಟ' ಮೊತ್ತಮೊದಲಿಗೆ ಸಮಿಕರಿಸಿ ಎತ್ತಿ ಹಿಡಿದಿವೆ.

11 ಈ ನನ್ನೂಲನ್ನು ಆಗಗೊಳಿಸಿದ ಸೀಯಗಂಗ ಗಂಗವಂಶದವನು. ಇವನ ಚರಿತ್ರೆಯ ಬಗೆಗೆ ನನ್ನೂಲಿನ ವಿಶಿಷ್ಟ ಪೀಠಿಕೆ ತಿಳಿಸುತ್ತದೆ. ಮೂರನೆಯ ಕುಲೋತ್ತುಂಗನ ಆಳಿಕೆಯ ಇಱಿದ ೩೪ ವರ್ಷಗಳ ಕಾಲದ ಅಂದರೆ ಕ್ರಿ.ಶ. ೧೧೮೧ ೧-೧೨೧೪ ವರೆಗಿನ ಅನೇಕಶಾಸನಗಳಲ್ಲಿ ಈತನ ಉಲ್ಲೇಖವಿದೆ. ಆಗತ್ತಿಯ ಕೊಣ್ಡದ

ಶಿವಾಲಯದಲ್ಲಿಯ್ಳ ಶಾಸನಗಳಿಂದ ಇವನಿಗೆ ಸೂರನಾಯರ್ಗ, ಉತ್ತಮಚೋಟಗಜ್ಗ, ವೀರಗಜ್ಗ, ವೆಟ್ಟುವನ್ ಅಸುರಾಭರಣ, ತಿರುವೇಗಮ್ಬುಡೈಯರ್—ಇವೇ ಮೊದಲಾದ ಹಲವು ಬಿರುದುಗಳಿದ್ದುದಾಗಿ ತಿಳಿಯುತ್ತದೆ.[13] ಇವನನ್ನು 'ಕುವಳಾಲ ಪರಮೇಶ್ವರ' ಎಂದು ಶಾಸನಗಳಲ್ಲಿ ಹೇಳಿರುವುದರಿಂದ ಇವನ ತಲೆನಗರ ಕುವಳಾಲ ಪುರ ಎಂದು ಹೆಸರಾಂತು[14] ತೊಣ್ಡೈಮಣ್ಡಲಕ್ಕೆ ಸೇರಿದ್ದು ಈಗ ಕನ್ನಡನಾಡಿನಲ್ಲಿ ಸೇರಿ ಕೋಲಾರ ಎನಿಸಿದೆ.

12 ಕುವಳಾಲಪರಮೇಶ್ವರಸೀಯಗಂಗನು ಅಪೂರ್ವಗ್ರಂಥಸಂಶೋಧನಾ ವಿನೋದಿ. ಅವನ ಕಾಲಕ್ಕೆ ತೊಲ್ಕಾಪ್ಪಿಯಮ್ ತನ್ನ ಗ್ರಹಣಾವಸ್ಥೆಯನ್ನು ಕಳೆದು ಕೊಂಡು ಅದರ ವ್ಯಾಖ್ಯಾನಗಳೊಂದಿಗೆ ತೊಳಗತೊಡಗಿತ್ತು. ಕಾಲಕಳೆದಂತೆ ಅದು ಎಲ್ಲಕಾಲಕ್ಕೂ ಉಳಿಯುವ ತಮಿಳು ಭಾಷೆಯ ಗಣಿಯಾಗಿ ವಿದ್ವಾಂಸರೇ ತಿಳಿಯು ವಂತಹದಾಗಿತ್ತು. ತಮಿಳುಭಾಷಾಲಕ್ಷಣದ ಅಂಗಗಳಾದ ಅಕ್ಷರ, ಪದ, ವಸ್ತು, ಛಂದಸ್ಸು, ಅಲಂಕಾರ ಎನ್ನುವ ವಿಷಯಗಳ ಅಭ್ಯಾಸ ಕುಂದಬಾರದೆಂದು ಮುಂದಾಲೋಚಿಸಿ, ವಿದ್ವಾಂಸರಲ್ಲದೆ ಎಳೆಯ ವಿದ್ಯಾರ್ಥಿಗಳೂ ಓದಿ ತಿಳಿಯುವ ಹಾಗೆ, ಲಕ್ಷಣಗ್ರಂಥ ವೊಂದನ್ನು ರಚಿಸುವಂತೆ ಬವಣಂದಿಮುನಿವರರಲ್ಲಿ ಬೇಡಿಕೆಸಲ್ಲಿಸಿ, ನನ್ನೂಲ್ ರಚನೆಗೆ ಸೀಯಗಂಗನು ಕಾರಣನಾದನು.

13 [15] ಬವಣಂದಿಮುನಿವರರು ಸೀಯಗಂಗನ ಬೇಡಿಕೆಯಂತೆ ತೊಲ್ಕಾಪ್ಪಿಯ ವನ್ನು ಆದಿಗ್ರಂಥವನ್ನಾಗಿ ಇರಿಸಿಕೊಂಡು, ತಮ್ಮ ಕಾಲದ ತಮಿಳಿಗೆ ತಕ್ಕಂತೆಯೂ, ಅಂದಿಗೆ ಆ ಭಾಷೆಯೊಳಕ್ಕೆ ಹೊಕ್ಕಿದ್ದ ಸಕ್ಕದದ ಲಕ್ಷಣಕ್ಕೆ ತಕ್ಕಂತೆಯೂ, ನನ್ನೂಲನ್ನು ತಂದರಾದರೂ ಅದು ಅಕ್ಷರ ಹಾಗೂ ಶಬ್ದ ಲಕ್ಷಣಗಳನ್ನು ಮಾತ್ರ ಹೇಳುವದಾಗಿದೆ. ಇದರ ಉಳಿದ ಮೂರೂ ಅಂಗಗಳು ಕಳೆದುಹೋಗಿವೆ ಎಂದು ತಿಳಿಯುವುದಕ್ಕೂ ತಂದುದೇ ಅವೆರಡೆಂದು ತಿಳಿಯುವುದಕ್ಕೂ ಹಲವು ಊಹೆಗಳಿವೆ. ಅವನ್ನು ಇಲ್ಲಿ ಹೇಳ ಹೊರಟರೆ ಹೆಚ್ಚಾಗುತ್ತದೆ. ತೊಲ್ಕಾಪ್ಪಿಯವು ತನ್ನ ಮೂರು ಅಧಿಕಾರಗಳಲ್ಲಿ ಐದೂ ಲಕ್ಷಣಗಳನ್ನು ಅಡಗಿಸಿಕೊಂಡಿರುವುದು ತಿಳಿದುದೇ ಆಗಿದೆ. ಹೀಗೆಯೇ ಎಲ್ಲ ಎಲ್ಲ ಗ್ರಂಥಗಳು ಪಂಚಲಕ್ಷಣಗಳನ್ನೂ ಒಂದುಗೂಡಿಸಿ ತಿಳಿಸಲು ಹೊರಟವೆಂದು ಹೇಳ ಲಾಗುವುದಿಲ್ಲ.[16] ಇಱೈಯನಾಯರ್ ಅಗಪ್ಪೊರುಳ್' [17]ನಮ್ಬಿಯಗಪ್ಪೊರುಳ್ ಎನ್ನುವ ಗ್ರಂಥಗಳು ಅಗಪ್ಪೊರುಳ್ (= ಒಳಹುರುಳಿನ, ಅಂತರಂಗಿಕವಸ್ತುವಿನ) ಬಗೆಗೇ ಹೇಳಬಂದವು. [18] ಪನ್ನಿರುಪಡಲಮ್ [19] ಪುಱಪ್ಪೊರುಳ್ ವೆಣ್ಬಾಮಾಲೈಯೂ ಪುಱಪ್ಪೊರುಳ್ (— ಹೊರಹುರುಳಿನ ; ಬಹಿರ್ವಸ್ತುವಿನ), ಬಗೆಗೇ ಹೇಳ ಬಂದವು. ಯಾಪ್ಪರುಙ್ಗಲಮ್, ಯಾಪ್ಪರುಙ್ಗಲಕ್ಕಾರಿಗೈ ಎನ್ನುವ ಗ್ರಂಥಗಳೂ ಛಂದೋ ಲಕ್ಷಣವೊಂದನ್ನು ಮಾತ್ರ ಹೇಳತೊಡಗಿದವು. ದಂಡಿಯ ಅಲಂಕಾರವೂ

ಮಾಜನ ಅಲಂಕಾರವೂ ಅಲಂಕಾರ ಲಕ್ಷಣವನ್ನು ಮಾತ್ರ ಹೇಳಹೊರಟವರ ನನ್ನೂಲಿಗೆ ಮೊದಲು ಹುಟ್ಟಿದ ನೇಮಿನಾದಮ್ ಎನ್ನುವ ಗ್ರಂಥವೂ ಅಕ್ಷರ, ಶಬ್ದ ಎನ್ನುವ ಎರಡರ ಲಕ್ಷಣಗಳನ್ನೇ ಹೇಳಲಾಗಿತ್ತು. ಹೀಗೆ ಆರಯ್ದು ನೋಡುವಲ್ಲಿ ಅಂದಿಗೆ ವಸ್ತು, ಛಂದ, ಅಲಂಕಾರಲಕ್ಷಣಗಳು ಒಂದೊಂದೂ ಪಡೆದಿದ್ದ ಅಟ ಅಗಲಗಳಿಗೆ ಒಪ್ಪುವ ಆಳವನ್ನು ನೇಮಿನಾದಮ್‌ನಲ್ಲಿ ಹೇಳಿದ ಅಕ್ಷರಶಬ್ದಲಕ್ಷಣಗಳು ಪಡೆದಿರಲಿಲ್ಲ. ಈ ಕೊಜತೆಯನ್ನು ನೀಗುವುದು ತಮ್ಮ ಕರ್ತವ್ಯವೆಂದು ನನ್ನೂಲ ಕರ್ತೃಗಳಿಗೆ ತೋಚಿತು ; ಆದುದರಿಂದ ಬೇಕಾದವುಗಳನ್ನು ಬೇಕಾದಷ್ಟು ಆಳವಿನಲ್ಲಿ ಹೇಳಿದರೆಂದು ಭಾವಿಸುವುದೇ ಒಳಿತು.

ಅಡಿಟಿಪ್ಪಣಿ :

೧ ಹದಿನೈದನೆಯ ಅಡಿಟಿಪ್ಪಣಿಯನ್ನು ನೋಡಿಕೊಳ್ಳಬೇಕು.

೨ ಅಗತ್ತಿಯನ್ : ಅಗಸ್ತ್ಯರಚಿತಗ್ರಂಥ. ಅಗಸ್ತ್ಯರು ದಕ್ಷಿಣಭಾರತೀಯರ ನಡೆನುಡಿಗಳ ಮುನ್ನಡೆಗೆ ಕಾರಣರಾದ ಋಷಿಗಳು.

೩ ಪೆಟ್, ಪೇಟ್ – ಟ್ (ಜಟ = ಜ ಉಚ್ಚಾರಣೆಗೊಳ್ಳುವ ಟ) ಪೆಜ್ > ಪೇರ್ < ಪಿರಿದು > ಪೇರ್ > ಹೇರ್ (ಕನ್ನಡ). ಪೆಜ, ಪೇಟ್–ಜ್ (ರಲ ರ ಹಾಗೂ ಲ-ಗಳ ನಡುವಣ ಉಚ್ಚಾರಣೆಯ ಟ)ಪೇರ್ < ಪೆರು. < ಪೆರುಮೈ (ತಮಿಳು).

೪ ತೊಲ್ಕಾಪ್ಪಿಯರ್ : ತೊಲ್ಕಾಪ್ಪಿಯವನ್ನು ಬರೆದವರು.

೫ ತೊಲ್ಕಾಪ್ಪಿಯನ್ : ತೊಲ್ = ಪುರಾತನ, ಕಾಪ್ಪಿಯನ್ = ಕಾವ್ಯನ್ = ಪುರಾತನಕಾವ್ಯ ಎಂದು ಹೆಸರಾಗಿರುವ ಇಲಕ್ಕಣನೂಲ್ ( = ಲಕ್ಷಣಗ್ರಂಥ).

೬ ಅವಿನಯನಾರ್ : ಅವಿನಯನು ಎಂಬ ಹೊತ್ತಗೆಯ ಓಜರು : ಅಗಸ್ತ್ಯರ ಶಿಷ್ಯರ ಪನ್ನಿರ್ವರಲ್ಲಿ ಒಬ್ಬರು. ಪ್ರಾಚೀನ ಗ್ರಂಥಗಳು ಹಲವು — ಅವುಗಳ ಕರ್ತೃಗಳ ಹೆಸರಿನಿಂದಲೆ ವ್ಯವಹರಿಸುತ್ತಿವೆ. ಉದಾಹರಣೆಗೆ – ಕರ್ತೃ ಅಗಸ್ತ್ಯ (ಸಂಸ್ಕೃತ) ಅಗತ್ತಿಯನ್ (ತ) ಇವರ ಗ್ರಂಥ : ಅಗತ್ತಿಯಮ್ ಎಂದು ಕರ್ತೃವಿನ ಹೆಸರಿನ ಪುಲ್ಲಿಂಗ ಸೂಚಕಪ್ರತ್ಯಯವಾದ ಅನ್, ಗ್ರಂಥದ ಹೆಸರಿನ ನಪುಂಸಕ ಲಿಂಗಸೂಚಕವಾದ ಅಮ್ ಆಗಿ ಮಾರ್ಪಾಟಾಗಿದೆ. ಹಾಗೆಯೇ, ಗುಣಗಜ್ಞನ ಕನ್ನಡಛಂದೋಗ್ರಂಥ. ಸಂಸ್ಕೃತಕಾವ್ಯಾನುಶಾಸನದ ಗುಣಗಾಂಗಿ ಎಂದು ಕನ್ನಡದಲ್ಲಿ ಹೆಸರಿಸಿಕೊಂಡಿತು. ಅತ್ತ ತಮಿಳಿನಲ್ಲಿ ವ್ಯವಹರಿಸುವಾಗ ಗುಣಗಾಂಗಿಯಮ್ ಎಂದು ಕರೆಸಿಕೊಂಡಿತು. ಇತ್ತೀಚಿನ ಕನ್ನಡ ಛಂದೋಗ್ರಂಥಗಳನ್ನು ಕುರಿತು

ವಿಚಾರಮಾಡುವಲ್ಲಿ 'ಗುಣಗಾಂಕಿಯಂ' ಎಂದು ಸಂಗ್ರಹಿಸ್ತಿದ್ದ ಗ್ರಜುತಿಸಿಕೊಂಡಿರು ವುದಜಿ ನಿಜನಾಮ ಮೇಲೆ ಹೇಳಿದ ಗುಣಗಾಜ್ಞ್ಯವೇ ಆಗಿದೆ.

೭ ಯಾಪ್ಪರುಜ್ಞಲಮ್ : ಇದು ಗುಣಸಾಗರರಿಂದ ಉಂಟಾದ ಹೊತ್ತಗೆ, ನೂರ್ಪಾ ಅಗವಲ್ (= ಕೂಗೋಜೆ, ಹೊತ್ತಗೆವಾಡು; ಪ್ರಚಾರಣಾಗ್ರಂಥಗೀತ) ಎನ್ನುವ ಸೂತ್ತಿರಯಾಪ್ಪು (=ಪೋಣಿಗೆಕಟ್ಟು; ಸೂತ್ರಬಂಧ) ಉಳ್ಳದಾಗಿ ಚಂದದ ನಡೆಯನ್ನು ತಿಳಿಸುವ ಇದು ಯಾಪ್ಪರುಜ್ಞಲಕ್ಕಾರಿಗ್ಗೆ (=ಕಟ್ಟರುವೆತೊಡುಗೆವೆಣ್ ; ಬಂಧೋಽಪೂರ್ವಾಭರಣಿ) ಎನ್ನುವ ಹೊತ್ತಗೆಗೆ ಮೊದಲ ಹೊತ್ತಗೆಯಾಗಿದೆ.

೮ ಕೊಜ್ಜುಸಂಣ್ಡಲವ ಹೆಚ್ಚಿನ ತಿಳಿವಿಗೆ ೧೪ನೆಯ ಅಡಿಟಿಪ್ಪಣಿ ನೋಡಿಕೊಳ್ಳಿ.

೯ ಮಯಿಲೈನಾದರ್ : ನನ್ನೂಲಿಗೆ ಮೊದಮೊದಲು ಒರೆಬರೆದವರು ; ಜೈನರು. ಅವರ ಕಾಲ ಇಂತಹದೆಂದು ತೀರ್ಮಾನಿಸಲಾಗಿಲ್ಲವಾದರೂ, ಅವರ ವ್ಯಾಖ್ಯಾನಮಾರ್ಗ ದಿಂದಲೂ, ಇದುವರೆಗೆ ದೊರಕದೆ ಆ ವ್ಯಾಖ್ಯಾನದೊಳಗೆ ಸೇರಿ ಉಳಿದುಬಂದಿರುವ ಹಲವು ಪ್ರಾಚೀನ ಲಕ್ಷಣಾಚಾರ್ಯರ ಕೊಳ್ಗೆಗಳಿಂದಲೂ, ಅವರು ಬವಣಂದಿಮುನಿವರರ ಕಾಲದಲ್ಲಿ ಅಲ್ಲದಿದ್ದರೆ ಕೆಲದಶಕಗಳ ಈಚೆಗೆ ಇದ್ದವರೆಂದು ಕಂಡುಕೊಳ್ಳಬಹುದು. ನನ್ನೂಲಿಗೆ ಆದ ಆ ಮೇಲಿನ ವ್ಯಾಖ್ಯಾನಗಳಿಗೂ ಮಯಿಲೈನಾದರ ವ್ಯಾಖ್ಯಾನಕ್ಕೂ ಅನೇಕ ಎಡೆಗಳಲ್ಲಿ ಬೇಜ್ಪಾಟುಂಟು. ಹಲವು ಎಡೆಗಳಲ್ಲಿ ತಳ್ಳುಪಡಿಯೂ ಉಂಟು. ಆದರೂ ಕೂಡ ಒಂದುಕಡೆಯೂ ಅವರನ್ನು ಹೆಸರಿಸಿ ಅಗೌರವಿಸಿಲ್ಲ. ಅವರ ಒರೆಯನ್ನು ಹಳೆಯ ಒರೆಯೆಂದೂ ಕರೆಯುವರು. ೧೯೧೮ರಲ್ಲಿ ಮಯಿಲೈನಾದರ ವ್ಯಾಖ್ಯಾನವು ಡಾ. ಉ. ವೇ. ಸಾಮಿನಾದ ಅಯ್ಯರ್ ಅವರಿಂದ ಮೊದಮೊದಲಿಗೆ ಅಚ್ಚುನಡೆಯಿತು.

೧೦ ತಿರು – (= ಶ್ರೀ) + ಮು – (ಮೂರು) + ಕೂಡಲ್ (= ಸಂಗಮ) = ತಿರುಮುಕ್ಕೂಡಲ್ > ತಿರುಮಕೂಡಲು (= ಕಾವೇರಿ, ಕಬಿನಿ. ಹಾಗೂ ಎದುರಿನ ನಡುವಣ ನೀರು ಕೂಡಲು ಎಂದು ಸಂಗಮದ ಹೆಸರು. ಸೀಯ (ತ) ಸಿಂಹ (ಸಂ)

೧೧ ಮುಡುಕುವ ತೊಜಿಯ ಎಡೆಯು ಈಗ 'ಮುಡುಕುತೊರೆ' ಎಂಬ ಊರಾಗಿದೆ.

೧೨ ಎಪಿಗ್ರಾಫಿಯ ಕರ್ನಾಟಕ ಐದನೆಯ ಸಂಪುಟ : ಮೈಸೂರಿನ ವಿಶ್ವವಿದ್ಯಾ ನಿಲಯದ ಪ್ರಕಟನೆ, ಶಾಸನದ ಸಂಖ್ಯೆ 229 (iii ; xiv ತಿ. ನ. 34; ಕಾಲ; 1021– 1022;....ಶ್ರೀ ಇರಾಸೇನ್ದಿರ ಶೋಳದೇವರ್ಕ್ಕು [ಯಾ] ಣ್ಡುಪ್ಪತ್ತಾವದು ಗಜ್ಞ್ಯಪಾಡಿ ಆನ ಮುಡಿಗೊಣ್ಡ ಶೋಳಮಣ್ಡಲತ್ತು ತ್ತೈಜ್ಞೈಇಡೈನಾಟ್ಟು ಮಾಯಿ ಲಜಿಞ್ಯ ಆನ ಸನನಾದಪ್ರಜತ್ತು ಇರವಿಕುಲಮಾಣಿಕ್ಕ ವಿಣ್ಣಗರ...), 240 (xiv

ತಿ.ನ. 226;....ಪಾಯಿಲಜ್ಙಲ ಆನ ಜನನಾದಪುರತ್ತು....), ಇವಲ್ಲದೆ 227ಱಿಂದ 242ಱ ವರೆಗಿನ ಉಜ್ಜಿಕೆಯ ಶಾಸನಗಳಲ್ಲೂ ನೋಡಬಹುದು.

೧೩ MER 186-7 Neelakanta Sastri, *The colas*, Page 401.

೧೪ ಮೇಜ್ಕುಪ್ ಪವಳಮಲೈ ವೇಙ್ಗಡಮ್ ನೇರ್ ಪಡಕ್ಕಾಪ್
ಆರ್ ಕ್ ಕು ಮುಸರಿ ಯಣಿಕೀಳಿಕ್ಕುಪ್ .... ಪಾರ್ಕ್ಕುಳುಯರ್
ತೆಲ್ಲಿರ್ಕ್ಕು ಪಿನಾಗಿ ತಿಗಲಿರುಬ ದಿಗಾದಮ್
ನಟ್ಟೊಣ್ಡೈಲ ನಾಡೆನವೇ ನಾಟ್ಟು.

— ಈ ತನಿ ಹಾಡಿನಿಂದ ತೊಣ್ಡೆಮಂಡಲವು ಪಡುವಲಿನಲ್ಲಿ ಪವಳಮಲೆಯನ್ನೂ ಮೂಡಲಲ್ಲಿ ಕಡಲನ್ನೂ, ತೆಂಕಲಲ್ಲಿ ಪೆಣ್ಣೈ(ಆಱ) ಪೆಣ್ಣಾಱ; ಪಿನಾಕಿನಿಯ)ನ್ನೂ, ಬಡಗಲಲ್ಲಿ ತಿರುವೆಂಕಟಮಲೆಯನ್ನೂ ಎಲ್ಲೆಯಾಗುಳ್ಳ ೨೦೦ಮೈಲಿಯ ಅಳವಿನ ನಾಡು.

ವಡಕ್ಕುತ್ ತಲಮ್ಬಳನಿ ನಾಟ್ಕಿೞಕ್ಕು ಚ್ಚೈಙ್ಗೋಡು
ಕುಡಕ್ಕುತ್ ತಿಸ್ಸೈಕ್ಕೋೞಿಕ್ ಕೋಡಾರ್... ಕಡಱ್ಕರೈಯಿನ್
ಓರಮದು ತೆಱ್ಕಾಗುಮ್ ಓರೆಣ್ ಬದಿನ್ಗಾದಮ್
ಸೇರನಾಟ್ ಟೆಲ್ಲೈಯೆನಚ್ ಚೆಪ್ಪು.

— ಕಟ್ಟಕಡೆಯೆಡೆಗೆ ಬಡಗಲಲ್ಲಿ ಪೞನಿಮಲೆಯನ್ನೂ, ಮೂಡಲಲ್ಲಿ, ತಿರುಚೆಙ್ಗೋಡನ್ನೂ ಪಡುವಲಲ್ಲಿ ಕೋೞಿಕ್ಕೋಡನ್ನೂ, ತೆಂಕಲಲ್ಲಿ ಕಡಲನ್ನೂ, ಎಲ್ಲೆಯಾಗಿ ಉಳ್ಳ ೮೦೦ಮೈಲಿಯ ಅಳವಿನ ನಡುವಣ ನೆಲ ಚೇರನಾಡು. ಅದರೊಳಗಿನ ಕೊಙ್ಗುಮಣ್ಡಲ ಎಂಬುದು ಪಡವಲಿಗೆ ವೆಳ್ಳಿಮಲೆ, ನೀಲಗಿರಿಮಲೆಗಳನ್ನೂ, ಬಡಗಲಿಗೆ ತಲೆಮಲೆ, ಬಿಳಿಗಿರಿರಂಗನ ಮಲೆ, ಮಾದೇಶ್ವರನ ಮಲೆ, ತಿಪ್ಪೂರುಮಲೆಗಳನ್ನೂ ತೆಂಕಲಿಗೆ ಪೞನಿಮಲೆಗಳನ್ನೂ ಮೂಡಲಿಗೆ ಶೇರ್ವರಾಯನ್ ಮಲೆ, ಪಚ್ಚೈಮಲೈ, ಕೊಲ್ಲಿಮಲೆಗಳನ್ನೂ ಉಳ್ಳ, ನಡುವಣ ನಾಡು. ಈಗ ಇದು ಕೊಯಮ್ಬುತ್ತೂರು, ಸೇಲಂಗಳಲ್ಲಿ ಸೇರಿದೆ.

೧೫ 'ಬವಣಾಂದಿ' ಎಂಬ ಸೊಲ್ಲು 'ಪವಣಾಂದಿ' ಎಂಬುದಱ ತಿರಿವು. ಪವಣಾಂದಿ ಎಂಬುದು ಪವಣ ನಂದಿ ಎಂಬ ಹೆಸರುಗಳ ಜಾಡಿಕೆಯ ಸೊಲ್ಲೊಟ್ಟಿನ ಬಿಡುಗು. ಜಿನ ಸಮಯದಲ್ಲಿ ಪವಣಮ್-....-ಎಂಬುದು ನಾಗರಲೋಕ; ನಂದಿ ಎಂಬುದು ಗೋಮುಖಯಕ್ಷ; ನಾಲ್ಕುಗಣಗಳಲ್ಲಿ ನೊದಲ ನಂದಿಗಣಕ್ಕೆ ಸೇರಿದ ಸನ್ಯಾತುಱವಿಗಳು ನಂದಿ ಎಂಬ ಹೆಸರುಳ್ಳವರು. { ಪವಣಾಂದಿ (ತ) [illegible] [ — ಪವಣೆನ ಪವಣ. ಪವಣಾಪವಣ, ಕಲ್ಪಿ ಕೆಱೆ. ಪ್ರವಣ ನಂದಿ. ನಾಗನಂದಿ ಎಂದೂ ಆಗಲೂಬಹುದು.

[ > ಬವಣಂದಿ (ಕ) [ ಬವಣ = ಹುಟ್ಟು. (ಮೊದಲ), ನಂದಿ = ನಂದಿ ಎಂಬ ಗಣ( = ಕೂಟ)ಕ್ಕೆ ಸೇರಿದ ಹುಟ್ಟುಸವಣತುಱವಿ ] }
ಪವಣಂದಿ, ಬವಣಂದಿ ಎಂಬ ಸೊಲ್ಲುಗಳಲ್ಲಿ ಕನ್ನಡದ ಬ - ಕೇಳ್ವಿ ನಯ ಹಾಗೂ ಒಳಿತಾದುದು; ಹುರುಳಹೊದ್ದುಗೆಯೂ ಉಳ್ಳದು. ಬ ಅನ್ನುವುದಕ್ಕೆ ಭ ಅನ್ನುವುದನ್ನಿಟ್ಟು ಬವಣಂದಿಗೆ ಬ್ರಾಹ್ಮಣಿಕೆಯನ್ನು ಕಟ್ಟಲು ಪಾಡುಪಟ್ಟವರೂ ಉಂಟು.

೧೬ ಇಱೈಯನಾರಗಪ್ಪೊರುಳ್ ; (ಎಱೆಯನಾರ ಒಳಹುರುಳು; ಶಿವಪ್ರಣೀತ ಅಂತರಂಗಿಕವಸ್ತು) ಕಡೆಯ ಸಂಘದ ವಿದ್ವಾಂಸರುಗಳಲ್ಲಿ ಒಬ್ಬರಾದ ಮಧುರೆಯ ಇಱೈಯನಾರಿಂದ ರಚಿತವಾದ ಹೊತ್ತಗೆ; ೬೦ ಸೂತ್ರಗಳನ್ನು ಉಳ್ಳದು.

೧೭ ನಮ್ಬಿಯಗಪ್ಪೊರುಳ್; (ನಂಬಿಯೊಳಹುರುಳು; ನಂಬ್ಯಂತರಂಗವಸ್ತು) ತೊಣ್ಡೈಮಣ್ಡಲದ ಪುಳಿಯಙ್ಕುಡಿ ಎನ್ನುವ ಊರಿನ ಜೈನಕುಲಕ್ಕೆ ಸೇರಿದ ನಂಬಿ ಎಂಬವರಿಂದ ಉಂಟಾದ ಹೊತ್ತಗೆ. ಆಶು, ಚಿತ್ರ, ವಿಸ್ತಾರ, ಮಧುರವ್ ಎಂಬ ನಾಲ್ಕು ಕವಿತ್ವದಲ್ಲೂ ಹಾಡಬಲ್ಲವರಾದುದರಿಂದ ನಾಟ್ಕವಿರಾಜನಮ್ಬಿ ಎಂದು ಹೆಸರಾಂತವರು. ಇವರು ಅಂತರಂಗಿಕ ವಸ್ತುವಿನ ವಿಸ್ತಾರವನ್ನು ೨೫೨ಸೂತ್ರಗಳಲ್ಲಿ ಸಂಗ್ರಹಿಸಿ ಪಂಚ ಪ್ರಕರಣಗಳ 'ನಾಟ್ಕವಿರಾಜನಮ್ಬಿಯಗಪ್ಪೊರುಳ್' ಎಂಬ ಹೊತ್ತಗೆಯಾಗಿ ತಮ್ಮ ಹೆಸರಿನಲ್ಲಿ ತಂದರು. ಇದೇ ನಂಬಿಯಗಪ್ಪೊರುಳ್ ಎನಿಸಿದೆ.

೧೮ ಪನ್ನಿರುಪಡಲವ್; ( ಹನ್ನೆರಡುಹಬ್ಬೋದು; ದ್ವಾದಶಪಟಲವ್) ಕುಱುಮುನಿವರ(— ಅಗಸ್ತ್ಯ)ರ ಚಿಟ್ಟಿಗರು ಪನ್ನಿರ್ವರಿಂದಲೂ ಆದ ಹೊರಹುರುಳ ಹೊತ್ತಗೆ.

೧೯ ಪುಱಪ್ಪೊರುಳ್ ವೆಣ್ಬಾಮಾಲೈ : ಇದು ತಮಿೞಿಲಕ್ಕಣ ಐದರಲ್ಲಿ ಹುರುಳಿನ ಬಿಂಗಡಣೆಯಾದ ಹೊಱ ಹುರುಳಿಗೆ ನಡೆನುಡಿ ( ಲಕ್ಷಣಲಕ್ಷ್ಯ) ಆಗಿ ಆವುದುದಾಗಿದೆ. ಪನ್ನಿರುಪಡಲದ ಬಿಱಿ ಹೊತ್ತಗೆ; ಇದೂ ಪನ್ನಿರುಪಡಲಗಳನ್ನುಳ್ಳದು. ಇದಱಲ್ಲಿ ಲಕ್ಷ್ಯವಾಗಿ ಅಮೆದುಳ್ಳ ವೆಣ್ಬಾಗಳು ೩೬೧; ಈ ಹೊತ್ತಗೆಯ ಓಜರು, ಐಯನಿದನಾರ್ ಎಂಬವರು. ಇವರು ಚೇರಕುಡಿಯಿಂದ ಬಂದವರು.

# ಆರಭಟೀ ವೃತ್ತಿಯ ಹಿನ್ನೆಲೆಯಲ್ಲಿ ನೃತ್ಯದ ಸಾಹಿತ್ಯಿಕ ವರ್ಣನೆ

ಎಸ್. ಜಗನ್ನಾಥ್

ಆರ್ಭಟ ಎಂಬ ಕನ್ನಡ ಶಬ್ದಕ್ಕೆ ಮೂಲ, ಸಂಸ್ಕೃತದ ಆರಭಟೀ. ಈ 'ಆರಭಟ' ಯೆಂಬುದು ಒಂದು ವೃತ್ತಿವಿಶೇಷ. ಇದು ಕೇವಲ ನೃತ್ಯದಲ್ಲಿ ಮಾತ್ರವಲ್ಲ, ನಾಟಕಾದಿಗಳಲ್ಲೂ ಉಂಟು. ವೃತ್ತಿಗಳ ಉತ್ಪತ್ತಿಯ ಬಗೆಗೆ ನಾಟ್ಯಶಾಸ್ತ್ರದಲ್ಲಿ ಬರುವ ಕಥೆಯಲ್ಲಿ ಈ ಆರಭಟಿಯ ಸ್ವರೂಪ ವರ್ಣಿತವಾಗಿದೆ :

> ಪ್ರಸ್ತಾವಪಾತ ಪ್ಲುತಲಂಘಿತಾನಿ ಚ್ಛೇದ್ಯಾನಿ ಮಾಯಾಕೃತಮಿಂದ್ರಜಾಲಮ್ ॥
> ಚಿತ್ರಾಣಿ ಯುದ್ಧಾನಿ ಚ ಯತ್ರ ನಿತ್ಯಂ ತಾಂ ತಾದೃಶೀಮಾರಭಟೀಂ ವದಂತಿ ॥

ರಭಸದ ಗತಿ, ರೋಷ, ಮಾಯ, ಇಂದ್ರಜಾಲ, ಯುದ್ಧ ಮುಂತಾದವು ರಂಗದ ಮೇಲೆ ತೋರಿಸಲ್ಪಟ್ಟಾಗ ರಸಿಕರಿಗೆ ಚಿತ್ತವೃತ್ತಿ ವಿಶೇಷಾನುಭವಕ್ಕೆ ಆರಭಟಿಯ ಬಣ್ಣ ಬರುತ್ತದೆ.

ಆರಃ ಎಂದರೆ ಸಾಮರ್ಥ್ಯ (ಹೆಚ್ಚಿನ ತೀಕ್ಷ್ಣತೆ, ತೀವ್ರವಾದ ಚಲನವಲನ) ಹೀಗೆಲ್ಲ ಅರ್ಥವಿದೆ. ಇದಕ್ಕೆ ಭಟಿಶಬ್ದವನ್ನು ಸೇರಿಸಿ (ಭಟಿಯೆಂದರೆ ಸೈನಿಕನ ಹೆಂಡತಿ. ಈ ಶಬ್ದವು ಧೈರ್ಯವನ್ನು ಸೂಚಿಸುವುದು), ಆರಭಟಿ ಶಬ್ದವನ್ನು ಮಾಡುವ ಒಂದು ಕ್ರಮ ವಾಚಸ್ಪತ್ಯ-ಶಬ್ದಕಲ್ಪದ್ರುಮಗಳಲ್ಲಿ ಕಂಡರೂ ಸ್ವಲ್ಪಮಟ್ಟಿಗೆ ಇದು ದೂರಾನ್ವಯ. ನಿಜವಾಗಿ ಹೇಳುವುದಾದಲ್ಲಿ ರಭಟೀ ಎಂಬುದನ್ನೊಂದು ಅವಯವವನ್ನಾಗಿ ಒಡೆದು ಅದರ ಹಿಂದೆ 'ಆ' ಉಪಸರ್ಗ ಸೇರಿಸುವುದೇ ಸರಿಯಾದ ಕ್ರಮ. 'ಸುತ್ತಲೂ (ಅತ್ತಿತ್ತ, ಎಲ್ಲ ಕಡೆಗೂ) ರಭಸದ ಚಲನೆ' ಎಂಬುದು ಸಹಜವಾಗಿ ಬರುವ ಅರ್ಥ. ಅಷ್ಟೇಕೆ, 'ರಭಸ' ಎಂಬುದಾಗಿಯೇ ಒಂದು ವಿಶೇಷಣ ಇದ್ದು (ರಭ + ಅಸಚ್) ವೇಗ, ಹರ್ಷ, ಔತ್ಸುಕ್ಯ ಈ ಅರ್ಥಗಳನ್ನು ಕೊಡುತ್ತದಂತೆ. 'ರಭಸ' ಎಂಬ ಶಬ್ದವಿದ್ದು ಸಾಮಾನ್ಯವಾದ ನಾಮಪದ (ವಿಶೇಷ್ಯ)ವಾಗಿ ಕೆಲವೊಮ್ಮೆ ಶಾಸ್ತ್ರಗ್ರಂಥಗಳಲ್ಲಿ ಖಂಡನಾವಾಕ್ಯಗಳಲ್ಲಿ ಕಾಣಿಸುವುದುಂಟು. "ಈ ಅಭಿಪ್ರಾಯ ಮುಂದಾಲೋಚನೆಯಿಲ್ಲದೆ ಬಂದಿದೆ, ಈ ಮಾತು ಆತುರದಿಂದ ಹೇಳಿದ್ದು"—ಎಂಬುದು ಅಲ್ಲಿ ರಭಸ ಶಬ್ದದ ಅಭಿಪ್ರಾಯ. ಉಚ್ಚಾರಣೆಯ ದೃಷ್ಟಿಯಿಂದ ರಪ ರಭ ರಫ ಇವೆಲ್ಲ ಹತ್ತಿರದ

(ಅರ್ಥಚ್ಛಾಯೆಯುಳ್ಳ) ಶಬ್ದಗಳು (ಧಾತುಗಳು). ವೇಗದ ಚಲನೆ, ಆತುರವಾದ (ಯಾವುದಾದರೊಂದು) ಕ್ರಿಯೆ-ಇವೆಲ್ಲ ಈ ಧಾತುಗಳಿಂದ ಹೊರಡುವ ತಾತ್ಪರ್ಯದ ಕ್ಷಿತಿಜಗಳು. ಭಾಗವತದಲ್ಲಿ "ವಜ್ರದಂಷ್ಟ್ರಾಃ ಶ್ವಾನಃ ಸಪ್ತಶತಾನಿ ವಿಂಶತಿಶ್ಚ ಸರಭಸಂ ಖಾದಂತಿ" (ಭಾಗವತ 11.19) ಎಂಬಲ್ಲಿ ರಭಸ ಎಂಬ ಶಬ್ದವು "ಗಬಗಬನೆ" (ತಿನ್ನುವ) ಅರ್ಥಕೊಡುವುದು ಸುಸ್ಪಷ್ಟ. ಜನಗಳು ಶಬ್ದಗಳನ್ನು ಒಮ್ಮೊಮ್ಮೆ ಅತಿ ಸ್ವಾತಂತ್ರ್ಯದಿಂದ ಉಚ್ಚಾರಣೆ ಮಾಡುವಾಗ ಕೆಲವು ವಿಕಾರಗಳನ್ನು ಮಾಡುವುದುಂಟು. ರಭಸದಲ್ಲಿನ ಸಕಾರವು ಟಕಾರವಾಗಿರುವುದಕ್ಕೆ ಈ ಕಾರಣ ಕೊಟ್ಟರೆ ಸಾಕಾಗುತ್ತದೆ. ಅಥವಾ ನಿಜವಾಗಿಯೂ ರಭಟವೆಂಬ ಶಬ್ದವೇ ಸ್ವತಂತ್ರವಾಗಿ ಬಳಕೆಯಾಗುತ್ತಿದ್ದು ಕೋಶ ಗ್ರಂಥಗಳಲ್ಲಿ ಯಾವುದಾದರೊಂದು ಕಾರಣದಿಂದ (ಅನವಧಾನತೆಯಿಂದ ?) ಈ ಶಬ್ದದ ಉಲ್ಲೇಖ ತಪ್ಪಿ ಹೋಗಿದ್ದಲ್ಲಿ ಅದೂ ಸಹ ಆಶ್ಚರ್ಯದ ಸಂಗತಿಯಲ್ಲ.

ಇಂಥದೊಂದು ಅನವಧಾನಕ್ಕೆ ಒಂದು ಸ್ವಾರಸ್ಯದ ಉದಾಹರಣೆ ಕೊಡಬಹುದು. 'ಶಬ್ದಕಲ್ಪದ್ರುಮ'ದಲ್ಲಿ ಈ 'ರಭಸ' ಶಬ್ದದ ವಿವೇಚನ ಪ್ರಸಂಗದಲ್ಲಿ 'ಅರುಣ'ನೆಂಬ ಗ್ರಂಥಕರ್ತ (ಕೋಷಕಾರ ?) ಈ ಶಬ್ದವನ್ನು "ಪೌರ್ವಾಪರ್ಯ ವಿಚಾರಃ" ಎಂದು ಅರ್ಥೈಸಿದ್ದಾನೆಂದು ಬರೆದಿದೆ. 'ರ್ಯ' ಎನ್ನುವ ಭಾಗ 'ರ್ಯಾ' ಎಂಬುದಾಗಿ ದೀರ್ಘವಾಗಬೇಕಿತ್ತು. ಮುದ್ರಾರಾಕ್ಷಸನ ಕಟಾಕ್ಷ ಇಲ್ಲಿ ಬಿದ್ದಿರುವುದಕ್ಕೆ ಅನವಧಾನವಲ್ಲದೆ ಬೇರೆ ಯಾವ ಕಾರಣ ಹೇಳಲೂ ಶಕ್ಯತೆಯಿಲ್ಲ.

'ಶೂರ, ಪರಾಕ್ರಮಿ, ಪಟು' ಎಂಬ ಶಬ್ದಗಳಿಗೆ ಪರ್ಯಾಯವಾಗಿ 'ಆರಭಟ' ಎಂಬ ಶಬ್ದವನ್ನು ವೈಜಯಂತಿ ಕೊಟ್ಟಿದೆ. (3-7-147)

ಒಟ್ಟಿನಲ್ಲಿ ಕಾವ್ಯಾನುಕೂಲವಾಗಿ ಇದರ ಅರ್ಥವನ್ನು ಇಷ್ಟರ ಮಟ್ಟಿಗೆ ತರಬಹುದು : ಉದ್ಧತಪ್ರಾಯವಾದ, ವೀರರಸದ ನೆಲೆಯನ್ನು ರಸಯಿತೃಗಳ ಹೃದಯಾಂತರಾಳದಿಂದ ಚಿಮ್ಮಿಸುವ ಸಾಮರ್ಥ್ಯದ ಸಾಹಿತ್ಯಿಕ ವಿಶೇಷಕ್ಕೆ ಆರಭಟೀ ವೃತ್ತಿಯೆಂದು ಹೆಸರು. ನಾಟ್ಯಾದಿಗಳಲ್ಲಿ ರಭಸದ ನಡಿಗೆಗಳಿಂದ ಇದು ಹೊಮ್ಮುತ್ತದೆ.

ಕಾವ್ಯಾದಿಗಳಲ್ಲಿ ಆರಭಟೀ ವೃತ್ತಿಯು ಎರಡು ರೀತಿಯಲ್ಲಿ ಬರಲು ಸಾಧ್ಯವಿದೆ. ಒಂದು, ನಾಟ್ಯಕ್ಕೆ ಅನುಕೂಲವಾದ ರೀತಿಯ ನೃತ್ಯಾದಿಗಳ ವರ್ಣನೆಯಲ್ಲಿ, ಮತ್ತೊಂದು ಉದ್ಧತ ಪ್ರಾಯವಾದ ಭಾಷಾ ವಿಭವದಲ್ಲಿ.

ಶಿವನು ತಾಂಡವ ನೃತ್ಯ ಮಾಡುತ್ತಾನೆಂಬ ವಿಚಾರ ಸುಪ್ರಸಿದ್ಧ. ತಾಂಡವ ನೃತ್ಯ ಮಾಡುವ ಪ್ರಸಂಗದ ವರ್ಣನೆಯಲ್ಲಿ ಆರಭಟೀ ವೃತ್ತಿಗೆ ಅನುಕೂಲಕರವಾದ ಸಾಮಗ್ರಿಗಳನ್ನು ಕವಿ ತರಬಹುದು. ಅಂಥ ಪ್ರಯತ್ನವನ್ನು ಕೆಲವರು ಮಾಡಿಯೂ

ಇದ್ದಾರೆ. ರಾವಣ ಬರೆದಿರುವವನೆನ್ನಲಾದ ಶಿವತಾಂಡವಸ್ತೋತ್ರದಲ್ಲಿ, ಪತಂಜಲಿ ಕರ್ತೃಕ (?) "ತಾಂಡವ" ಸ್ತೋತ್ರದಲ್ಲಿ ನೃತ್ಯದ ಪ್ರಸ್ತಾವವಿದೆ. ಹಾಗೆಯೇ ಶಂಕರಾಚಾರ್ಯಕೃತವೆಂದು ಹೇಳಲಾಗಿರುವ ಶಿವಪಾದಾದಿಕೇಶಾಂತಸ್ತೋತ್ರದಲ್ಲಿಯೂ ಸಹ ಇದು ಕಾಣಸಿಕ್ಕುತ್ತದೆ. ನಟೇಶ ವಿಜಯ, ಪತಂಜಲಿ ಚರಿತಾದಿ ಕಾವ್ಯಗಳಲ್ಲೂ ತಾಂಡವ ನೃತ್ಯದ ಪ್ರಸ್ತಾವವಿದೆ.

ರೂಪಕವನ್ನೋ ಸಂಬಂಧಾತಿಶಯೋಕ್ತಿಯನ್ನೋ ಸ್ವಭಾವೋಕ್ತಿಯನ್ನೋ ತರುವ ಪ್ರಸಂಗಕ್ಕೆ ತಾಂಡವ ನೃತ್ಯವನ್ನು ಒಂದು ವಿಷಯವನ್ನಾಗಿ ಆರಿಸಿಕೊಳ್ಳುವುದು ಅಷ್ಟೊಂದೇನೂ ಚಾತುರ್ಯದ ಸಂಗತಿಯಲ್ಲ. ವರ್ಣನೀಯವಾದ ಅನೇಕ ವಸ್ತುಗಳಂತೆ ಇದೂ ಒಂದು ವಸ್ತುವಾಗುತ್ತದೆ ಕವಿಗಳಿಗೆ. ಅದಕ್ಕಿಂತ ಹೆಚ್ಚಿನ 'ನೃತ್ಯತ್ವ/ತಾಂಡವತ್ವ' ಅವುಗಳಲ್ಲಿ ಕಾಣಸಿಗುವುದಿಲ್ಲ. ಆದರೆ, ಛಂದೋಬಂಧಗಳಿವೆ. ಅಂಥ ಛಂದೋಬಂಧಗಳಲ್ಲಿ ಕೆಲವನ್ನು ಬಳಸಿ ಅನುಪ್ರಾಸಭೂಯಿಷ್ಠವಾದ ಪದಗಳಿಂದ ನೃತ್ಯ ವರ್ಣನೆ ಮಾಡಿದರೆ ತಾಂಡವನೃತ್ಯಕ್ಕೆ ನ್ಯಾಯ ಸಲ್ಲಿಸಿದಂತಾಗುತ್ತದೆಂದು ಕೆಲವರ ಮನಸ್ಸಿನಲ್ಲಿ ಇರುವ ಹಾಗಿದೆ. ಪಂಚಚಾಮರವೃತ್ತದಲ್ಲಿನ ರಾವಣಕೃತ (?) ಶಿವ ತಾಂಡವಸ್ತೋತ್ರ ಇದಕ್ಕೆ ಸುಪ್ರಸಿದ್ಧವಾದ ಉದಾಹರಣೆ. ಈ ಸ್ತೋತ್ರದ ಹತ್ತನೆಯ ಪದ್ಯದ ಉತ್ತರಾರ್ಧದಲ್ಲಿ ನೃತ್ಯದ ನೇರ ಪ್ರಸ್ತಾವ ಇದೆ.

"ಧಿಮಿದ್ಧಿಮಿದ್ಧಿಮಿಧ್ವನನ್ಮೃದಂಗ ತುಂಗಮಂಗಲ-
ಧ್ವನಿಕ್ರಮಪ್ರವರ್ತಿತ ಪ್ರಚಂಡತಾಂಡವಃ ಶಿವಃ ॥"

"ಧಿಮಿದ್ಧಿಮಿದ್ಧಿಮಿ"—ಎಂಬ ಪಾಟಾಕ್ಷರಗಳನ್ನು ನೃತ್ಯದಲ್ಲಿ ಉಪಯೋಗಿಸುತ್ತಾರೆಂಬ ಉಲ್ಲೇಖ ಮಾಡಿದ್ದಷ್ಟಕ್ಕೆ ಕವಿ ಕೃತಕೃತ್ಯನಾಗಿದ್ದಾನೆ. ಪಂಚಚಾಮರ ವೃತ್ತದ ನಡಿಗೆ ನೃತ್ಯಕ್ಕೆ ಅನುಗುಣವೆಂಬುದು ನಿಜವಿರಬಹುದು. ಆದರೆ ಗತಿಯಲ್ಲಿ ಏಕತಾನತೆ ಇದ್ದರೆ ಅದು ನೃತ್ಯಪ್ರಯೋಗದಲ್ಲಿ ಇರಬೇಕಾದ ಆಕರ್ಷಣೆಯನ್ನು ಕಳೆದು ಕೊಳ್ಳುತ್ತದೆ. ಸಾಹಿತ್ಯಿಕವಾದ ನೃತ್ಯತ್ ಪ್ರಾಯತೆಯನ್ನು ಛಂದಸ್ಸಿನ ಓಟಕ್ಕೆ ಸಮೀಕರಿಸುವಾಗ ತುಂಬಾ ಹೆಚ್ಚಿನ ಅವಧಾನವಿರಬೇಕಾಗಿರುವುದು ಈ ಕಾರಣ ಕ್ಕಾಗಿಯೇ. ಪತಂಜಲಿವಿರಚಿತವಾಗಿರುವುದೆಂಬ ಉಲ್ಲೇಖದೊಂದಿಗೆ ಕೆಲವು ಸ್ತೋತ್ರ ಗ್ರಂಥಗಳಲ್ಲಿ ಮುದ್ರಿತವಾಗಿರುವ ತಾಂಡವಸ್ತೋತ್ರವೆಂಬ ಒಂದು ಸ್ತೋತ್ರದಲ್ಲಿ ಅಜ್ಞಾತ ವೃತ್ತವೊಂದನ್ನು ಕವಿ ಬಳಸಿದ್ದಾನೆ. ಈ ವೃತ್ತದಲ್ಲಿ ಒಂದು ಪಾದಕ್ಕೆ ೨೬ ಅಕ್ಷರಗಳು ಬರುತ್ತವೆ. ಇದರ ಳನೇ ಪದ್ಯದಲ್ಲಿ ನೃತ್ಯದ ಉಲ್ಲೇಖ ಹೀಗಿದೆ.

ಅನಂತನವರತ್ನವಿಲಸತ್ ಕಟಕ ಕಿಂಕಿಣಿ ಝುಲಂ ಝುಲ ಝುಲಂ ಝುಲರವಂ
ಮುಕುಂದವಿಧಿಹಸ್ತಗತಮಡ್ಡಲಯಧ್ವನಿಧಿಮಿಧಿಮಿದ್ಧಿನರ್ತನಪದಂ ।
ಶಕುಂತರಥಬರ್ಹಿರಥನಂದಿಮುಖ ದಂತಿಮುಖಭೃಂಗಿರಿಟಿಸಂಘನಿಕಟಂ
ಸನಂದಸನಕ ಪ್ರಮುಖವಂದಿತಪದಂ ಪರಚಿದಂಬರನಟಂ ಹೃದಿ ಭಜ ॥

ಇದೊಂದು ಪದ್ಯವನ್ನು ಯಾರಾದರೂ ನೃತ್ಯಕ್ಕೆ ಅಳವಡಿಸುವ ಪ್ರಯತ್ನ ಮಾಡಬಹುದು ಪಂಚಚಾಮರವೃತ್ತದ ಓಟ ಸರಿಸುಮಾರು ಸೈನ್ಯದ ಮಾರ್ಚ್‌ನಂತೆ ಭಾಸವಾಗುವುದರಿಂದ ದೀರ್ಘಕಾಲದವರೆಗೆ ಅದರ ಪ್ರಯೋಗವು ದ್ರಷ್ಟೃಗಳ ವೈರಸ್ಯಕ್ಕೆ ಕಾರಣವಾಗುವ ಸಂಭವವಿದೆ. ಅದರೆ ಈ ಪ್ರಕೃತ ಛಂದಸ್ಸಿನಲ್ಲಿ ಜ-ಸ-ನ-ಭ; ಲ, ಗ ಎಂಬ ಗಣ ಪ್ರಸ್ತಾರವಿದೆ. ಯತಿಯನ್ನು ಪ್ರಧಾನವಾಗಿ ತೋರಿಸುತ್ತ ವಿವಿಧ ಲಯಗಾರಿಕೆಯನ್ನು ಇದರಲ್ಲಿ ಸಾಧಿಸಲು ಆಗುತ್ತದೆ.

ನೃತ್ಯಶಾಸ್ತ್ರದ ದೃಷ್ಟಿಯಿಂದ ಒಂದು ಅತೃಪ್ತಿಯನ್ನು ಈ ಎರಡೂ ಸ್ತೋತ್ರಗಳ ಬಗೆಗೆ ವ್ಯಕ್ತಪಡಿಸಲೇಬೇಕಾಗುತ್ತದೆ. ನೃತ್ಯಕ್ಕೆ ಸಂಬಂಧಿಸಿದ ಯಾವ ಶಾಸ್ತ್ರೀಯ ಪರಿಚಯವನ್ನೂ ಈ ಸ್ತೋತ್ರಗಳು ತೋರಿಸುವುದಿಲ್ಲ. ಈ ಅತೃಪ್ತಿಯು "ಕೃಷ್ಣ ತಾಂಡವ ಸ್ತೋತ್ರ"ವೆಂಬ ಹೆಸರಿನ, ಆ ಹೆಸರಿಗೆ ಸರ್ವಥಾ ತಕ್ಕದ್ದಲ್ಲದ ಅಜ್ಞಾತ ಕರ್ತೃಕ ಸ್ತೋತ್ರದ ಪಠನದಿಂದ ಇನ್ನಷ್ಟು ಹೆಚ್ಚುತ್ತದೆ. ಅದರಲ್ಲಿ ನೃತ್ಯದ ಪ್ರಸ್ತಾಪವೇ ಇಲ್ಲ. ಅಂದಮೇಲೆ ಅದಕ್ಕಿಟ್ಟಿರುವ ಹೆಸರಿನಲ್ಲಿ ತಾಂಡವವೆಂಬ ಶಬ್ದವನ್ನು ತುರುಕಿರುವುದರ ಉದ್ದೇಶ ಸಾಮರಸ್ಯವಲ್ಲವಾದರೂ ಪ್ರೀತಿಯನ್ನು ಉಂಟು ಮಾಡಿಸಬೇಕೆಂಬುದಲ್ಲದೆ ಬೇರೆಯಾಗಿರಲು ಸಾಧ್ಯವಿಲ್ಲ. ಭಾಷೆಯಲ್ಲಿ ಓಜೋಗುಣದಿಂದ ತುಂಬಿ ತುಳುಕುವ ಸಮಾನ ಭೂಯಿಷ್ಠತೆಯಾದರೂ ಇದೆಯೋ ಎಂದರೆ, ಅದೂ ಇಲ್ಲ.

ಶಂಕರಾಚಾರ್ಯ ಕೃತ (?) ಶಿವ ಪಾದಾದಿ ಕೇಶಾಂತ ಸ್ತೋತ್ರದಲ್ಲಿ—

ವೃತ್ತಾರಂಭೇಷು ಹಸ್ತಾಹತಿಮುರವಧಿಮಿದ್ಧಿ ಕ್ಕೃತೈರತ್ಯುದಾರೈ
ಶ್ಚಿತ್ತಾನಂದಂ ವಿಧತ್ತೇ ಸದಸಿ ಭಗವತಃ ಸಂತತಂ ಯಃ ಸ ನಂದೀ ।
ಚಂಡೀಶಾತ್ಯಾ (? ದ್ಯಾ) ಸ್ತಥಾಽನ್ಯೇ ಚತುರ ಗುಣಗಣಪ್ರೀಣಿತಸ್ವಾಮಿಸತ್ಕಾ—
ರೋತ್ಕರ್ಷೋದ್ಯತ್ತೃತಾಪಾಃ ಪ್ರಮಥಪರಿವೃಢಾಸ್ಸಂತು ಸಂತೋಷಿಣೋ ನಃ ॥

ಎಂಬ ೧೨ನೇ ಪದ್ಯದ ವರ್ಣನೀಯ ವಸ್ತು ಶಿವನ ಪ್ರತಾಪ. ಇದರ ಪೃಷ್ಠಭೂಮಿಕೆಯು ರೂಪದಲ್ಲಿ ನೃತ್ಯದ ಪ್ರಸ್ತಾಪವಿರುವುದರಿಂದ, ಉದ್ಧತಪ್ರಾಯವಾದ ನೃತ್ಯವಾವುದನ್ನಾದರೂ ರಂಗದ ಮೇಲೆ ಪ್ರದರ್ಶಿಸುವ ಸಮಯದಲ್ಲಿ ತಾಳದ ಚೌಕಟ್ಟಿಲ್ಲದ ಅನಿಬದ್ಧ ಗಾಯನಕ್ಕೆ ಇದನ್ನು ಅಳವಡಿಸಿಕೊಳ್ಳಬಹುದೆಂದು ತೋರುತ್ತದೆ.

ಆದರೆ ಈ ಮಾತನ್ನು ರಾಮಕೃಷ್ಣ ವಿರಚಿತ ಭಗವತೀ ಪುಷ್ಪಾಂಜಲಿಸ್ತೋತ್ರವೆಂಬ ಹೆಸರಿನ ಪ್ರಸಿದ್ಧ ಸ್ತೋತ್ರಕ್ಕೆ ಅನ್ವಯಿಸಲಾಗುವುದಿಲ್ಲ. ಇದನ್ನಲ್ಲಿ ಕೇಳುಗರ ಹೃದಯವನ್ನು ಕುಣಿಸುವ ಪದಶಯ್ಯೆ ಇರುವುದೇನೋ ನಿಜವಾದರೂ ಒಂದೇ

ರೀತಿಯ ಗತಿಯ ನೃತ್ಯಕಲಾವಿದರು ಹಾಗೂ ಛಾಪುಕರು ಇಬ್ಬರಿಗೂ ಅನುಕೂಲ ವಾಗಿಲ್ಲ, ಒಂದೆರಡು ಪದ್ಯಗಳನ್ನು ಮಾತ್ರ (ಉದ್ಧತಪ್ರಾಯ, ನೃತ್ಯಾನುಕೂಲ ರಚನೆ ಯನ್ನು ರಂಗದ ಮೇಲೆ ಪ್ರದರ್ಶಿಸುವ ಸಂದರ್ಭದಲ್ಲಿ ಮಧ್ಯೆ ರುಚಿಭೇದದ ಉದ್ದೇಶ ಕ್ಕಾಗಿ) ಬಳಸಿಕೊಳ್ಳಬಹುದೆಂದು ತೋರುತ್ತವೆ :

"ಧಿಮಿಕಟಧಿಕ್ಕಟಧಿಮಿಧ್ವನಿ ಘೀರ ಮೃದಂಗನಿನಾದರತೇ
ಜಯ ಜಯ ಹೇ ಮಹಿಷಾಸುರಮರ್ದಿನಿ ! ರಮ್ಯ ಕಪರ್ದಿನಿ ! ಶೈಲಸುತೇ !"
ಇತ್ಯಾದಿ.

ಒಮ್ಮೊಮ್ಮೆ ವಿರಳತರವಾದ ನೃತ್ಯ ಶಾಸ್ತ್ರಪಾಂಡಿತ್ಯವನ್ನು ಕವಿಗಳು ಉದ್ಧಟ ಪ್ರಾಯನೃತ್ಯದ ವರ್ಣನೆಯಲ್ಲಿ ಪ್ರದರ್ಶಿಸುವುದುಂಟು. ವೇದಾಂತದೇಶಿಕನ ಯಾದವಾ ಭ್ಯುದಯದಲ್ಲಿ, ಕವಿಯು ಕೃಷ್ಣನು ಕಾಲಿಯ ನಾಗನ ಹೆಡೆಯ ಮೇಲೆ ನೃತ್ಯ ಮಾಡುವ ವರ್ಣನೆಯಲ್ಲಿನ—

ತದ್ಭೋಗವೃಂದೇ ಯುಗಪನ್ಮುಕುಂದ "ಶ್ಚಾರೀ"ವಿಶೇಷೇಣ ಸಮೃಕ್ಷಿ ನೃತ್ಯನ್ ।
ಪರ್ಯಾಕುಲೇ ವೀಚಿಗಣೇ ಪಯೋಧೇಃ ಸಂಕ್ರಾಂತಬಿಂಬೋ ಬಹುಧೇವ
ಚಂದ್ರಃ ॥೪.೧೧೯ ॥

ತದುತ್ತಮಾಂಗಂ ಪರಿಕಲ್ಪ್ಯ ರಂಗಂ ತರಂಗನಿಷ್ಪನ್ನಮೃದಂಗನಾದವ್ ।
ಪ್ರಶಸ್ಯಮಾನಸ್ತ್ರಿದಶೈರಕಾರ್ಷೀದ ವ್ಯಾಹತಾಮಾರಭಟೀಮನಂತಃ ॥೪,೧೭೦॥

—ಈ ಎರಡು ಪದ್ಯಗಳು ಕ್ರಮವಾಗಿ 'ಚಾರೀ' : 'ಆರಭಟೀ' ಎಂಬ ಶಬ್ದಗಳನ್ನು ಕೊಟ್ಟಿವೆ. ಖಟಕಾಮುಖವೆಂಬ (ನೃತ್ಯಹಸ್ತವಿಶೇಷ) ಪದವನ್ನು ಅಮರುಕಶತಕದ ಮೊದಲನೇ ಪದ್ಯದಲ್ಲಿ ನೋಡಬಹುದು.

ಜ್ಯಾಕೃಷ್ಟಿಬದ್ಧ ಖಟಕಾಮುಖಪಾಣಿ ಪೃಷ್ಠ
ಪ್ರೇಂಖನ್ನಖಾಂಶುಚಯಸಂವಲಿತೋಽಂಬಿಕಾಯಾಃ
ತ್ವಾಂ ಪಾತು ಮಂಜರಿತ ಪಲ್ಲವ ಕರ್ಣಪೂರ
ಲೋಭ ಭ್ರಮದ್ ಭ್ರಮರಭೃತ್ ಕಟಾಕ್ಷಃ ॥

ವ್ಯಾಕರಣ, ವೇದಾಂತ, ಮೀಮಾಂಸಾ, ವೇದಾಂತ ಸಾಂಖ್ಯ ಇತ್ಯಾದಿ ಶಾಸ್ತ್ರ ಗಳ ಪರಿಚಯವನ್ನು ಕೆಲವೊಮ್ಮೆ ಅಗಾಧ ಪಾಂಡಿತ್ಯವನ್ನು ತಮ್ಮ ಕಾವ್ಯಗಳಲ್ಲಿ ತೋರ್ಪಡಿಸುವ ಕವಿಗಳು ನೃತ್ಯದ ಬಗೆಗೆ–ಅ ಶ್ಯವಿದ್ದಾಗಲೂ ಇಷ್ಟೊಂದು ಮಟ್ಟದ ಆಸಕ್ತಿಯನ್ನು ತೋರ್ಪಡಿಸುವುದು ಸ್ವಲ್ಪ ಮಟ್ಟಿಗೆ ಮಾನಸಿಕವಾಗಿ ಕಿರಿಕಿರಿಯೇ. ನೃತ್ಯದ ವರ್ಣನೆಗಳಲ್ಲಿ ಕೂಡ ನೃತ್ಯದ ಪಾರಿಭಾಷಿಕ ಶಬ್ದಗಳನ್ನು ತರದ ಕವಿಗಳಿಗೆ ನೃತ್ಯ ಕಲೆಯ ಬಗೆಗೆ ಆಸಕ್ತ್ಯಭಾವವನ್ನಾರೋಪಿಸಲಾಗದು. ಪ್ರಾಸಂಗಿಕವಾಗಿ ನೃತ್ಯವನ್ನು ಅವರು ಪದೇ ಪದೇ ವರ್ಣನೆ ಮಾಡುತ್ತಾರಲ್ಲ! ಆ ವರ್ಣನೆಗಳಿಗೆ ನೃತ್ಯಶಾಸ್ತ್ರದಲ್ಲಿನ ಪಾರಿಭಾಷಿಕ ಪದಗಳನ್ನೇ ಬಳಸಿದ್ದಲ್ಲಿ ಅವುಗಳಿಗೆ ಹೆಚ್ಚಿನ ಗಟ್ಟಿತನ ಬರುತ್ತಿತ್ತು.

ಒಬ್ಬನೇ ಕವಿ—ಪ್ರಕೃತ ಲೇಖಕನಿಗೆ ತಿಳಿದ ಮಟ್ಟಿಗೆ–ನೃತ್ಯಶಾಸ್ತ್ರದ ಖಚಿತ ಜ್ಞಾನವನ್ನು ತನ್ನ ಕಾವ್ಯದಲ್ಲಿ ತೋರ್ಪಡಿಸಿಕೊಂಡಿದ್ದಾನೆ ಕವಿ–ರತ್ನಾಕರ. ಕಾವ್ಯ—ಹರವಿಜಯ. ಇವನು ಕಾಶ್ಮೀರದವನು. ಕಾಲ ೯ನೇ ಶತಮಾನ. ಸಂಗೀತ, ನೃತ್ಯ, ನಾಟಕ ಈ ಮೂರೂ ಶಾಸ್ತ್ರಗಳಲ್ಲಿನ ಪಾರಿಭಾಷಿಕ ಶಬ್ದಗಳು ಇವನ ಗ್ರಂಥ ದುದ್ದಕ್ಕೂ ಪದೇ ಪದೇ ಬರುತ್ತವೆ. 'ತಾಂಡವ'ವೆಂಬ ಶಬ್ದವನ್ನು ಇವನು ಬಹಳ ಸಲ ಪ್ರಯೋಗ ಮಾಡಿರುವುದು ಕಂಡುಬರುತ್ತದೆ. ೫೦ ಸರ್ಗ ಹಾಗೂ ೪೩೨೧ ಪದ್ಯಗಳ ಈ ಬೃಹತ್ ಕಾವ್ಯವು ನೃತ್ಯ ಸಂಗೀತಾದಿಗಳ ಸಾಹಿತ್ಯಿಕ ದಾಖಲಾತಿಯನ್ನು ಬಯ ಸುವ ರಸಿಕರಿಗೆ ಸ್ವಾದಿಷ್ಟವಾದ ರಸಭೋಜನವೇ ಸರಿ.

ಶಿವನು ಅಂಧಕಾಸುರನನ್ನು ಸಂಹಾರ ಮಾಡಿದ ವಸ್ತು ಈ ಮಹಾಕಾವ್ಯದಲ್ಲಿ ಅತಿ ವಿಸ್ತೃತವಾಗಿ ವರ್ಣಿತವಾಗಿದೆ. ಪಾಶುಪತ, ಸಾಂಖ್ಯ ಮುಂತಾದ ಶಾಸ್ತ್ರ ಗಳಲ್ಲಿ ಪ್ರಾಸಂಗಿಕವಾದ ಮಹಾಪಾಂಡಿತ್ಯವನ್ನು ರತ್ನಾಕರ ಮೆರೆದಿದ್ದಾನೆ. ಆ ವಿಚಾರ ನಮಗಿಲ್ಲಿ ಪ್ರಕೃತವಲ್ಲ. ಈ ಲೇಖನದಲ್ಲಿ ಉದ್ಧತಪ್ರಾಯವಾದ ನೃತ್ಯ 'ತಾಂಡವದ' ಸಾಹಿತ್ಯೋಪಸ್ಥಿತಿಯ ಒಗೆಗೆ ಇಲ್ಲಿಯವರೆಗೆ ವಿಚಾರ ವಿಮರ್ಶೆ ನಡೆಸಿರುವುದರಿಂದ, ಹರವಿಜಯದಲ್ಲಿನ ಈ ತಾಂಡವ ನೃತ್ಯದ ಕಾವ್ಯ-ಯೋಗ್ಯ-ಗೌರವ ಸಂದಿರುವ ಬಗೆ ಹೇಗೆಂದು ಪರಿಚಯಿಸಿದರೆ ಸಾಕೆಂದು ತೋರುತ್ತದೆ.

ಪ್ರಾಸಂಗಿಕವಾಗಿ ಒಂದು ಮಾತು : ಉದ್ಧತಪ್ರಾಯವಾದ ವೃತ್ತಿಗೆ ಆರಭಟೀ ಎಂಬ ಹೆಸರಿರುವುದು ಸರಿಯಷ್ಟೆ. ಹರವಿಜಯವಲ್ಲಿನ ೧೧ನೇ ಸರ್ಗಕ್ಕೆ ಅಗ್ನಿ ದಂಷ್ಟ್ರಾರಭಟೀ ಎಂಬುದೇ ಹೆಸರಾಗಿದೆ. ವೀರರಸೋತ್ತೇಜಕವಾದ ಆವೇಶಯುಕ್ತ ಮಾತುಗಳನ್ನು ಅಗ್ನಿದಂಷ್ಟ್ರನೆಂಬ ಗಣಾಧಿಪತಿಯು ಆಡಿದ್ದನ್ನು ಆ ಸರ್ಗದಲ್ಲಿ ವರ್ಣನೆ ಮಾಡಿದೆ.

—ಈ ವಿಚಾರ ಹಾಗಿರಲಿ. ಪ್ರಕೃತ, ಶಿವತಾಂಡವದ ವರ್ಣನೆಯನ್ನು ರತ್ನಾ ಕರ ೨ನೇ ಸರ್ಗದಲ್ಲಿ ಮಾಡಿರುವ ಬಗೆ ನೋಡಬಹುದು.

೧–೧೮. ದೇವತೆಗಳು ಶಿವನನ್ನು ನೋಡಲು ಕೈಲಾಸದಲ್ಲಿನ "ಜ್ಯೋತ್ ಸ್ನಾವತೀ" ಎಂಬ ಪಟ್ಟಣಕ್ಕೆ ಒಮ್ಮೆ ಬಂದರು. ಶಿವನನ್ನು ಕಂಡು ವಿನಯಪೂರ್ವಕ ಅವರೆಲ್ಲ ಕುಳಿತಾದ ಅನಂತರ—

೧೯. ನೃತ್ಯದ ಪ್ರಾರಂಭವನ್ನು ಸೂಚಿಸುವ ಮುರಜಧ್ವನಿಯಾಯಿತು. ಆ ಧ್ವನಿಯಲ್ಲಿ ಸ್ವರವಿಶೇಷಗಳಿಗೆ ಬೇಕಾದ ಮೃದಂಗದ ಸ್ವರ ಸ್ಥಿತಿಗಳಿದ್ದವು. ಮಾರ್ಗ ಮುಂತಾದ ಹೊಡೆತದ ಪ್ರಭೇದಗಳಿದ್ದವು. ಸಮ-ವಿಷಮ ಪ್ರಚಾರಗಳು, ಸ್ರೋತೋಮುಖಾದಿ ಯತಿಗಳು, ಕರಣಗಳು ಮುಂತಾದ್ದಕ್ಕೆಲ್ಲ ಅವುಗಳಲ್ಲಿ ಅನುಕೂಲವಿತ್ತು.

೨೦. ಆವಾಪ ಮುಂತಾದ ಕ್ರಿಯೆಗಳನ್ನು ಬಳಸಿ ತಾಂಡವವನ್ನು ತಂಡುವು ಹಾಡಿದನು.

೨೧. ಬ್ರಾಹ್ಮಿ ಮುಂತಾದ ಸಪ್ತಮಾತೃಕೆಯರು ಲಲಿತವಾದ ಅಭಿನಯದಿಂದ ಕೂಡಿದ ನಾಟ್ಯವನ್ನು ಅಭಿನಯಿಸಿದರು.

೨೨. ರಂಗಪೀಠದಲ್ಲಿ ಮಂಡಿಸಿದ್ದ ಗಣಾಧಿಪತಿಗಳು ಶೃಂಗಾರಾದಿ ರಸಗಳೇ ಮೂರ್ತಿ ತಳೆದಿವೆಯೋ ಎಂಬಂತೆ ರಂಗದಲ್ಲಿಯೇ ಸುತ್ತಾಡಿದರು.

೨೩. ಅವನಿಗೆ ನೃತ್ತದ ಉಪದೇಶ ಕೊಡಲು ಶಿವ ಸ್ವಯಂ ಎದ್ದು ನಿಂತ. ಅವನ ಭಾರಕ್ಕೆ ಭೂಮಿ ಹೊತ್ತಿದ್ದ ಆದಿಶೇಷನ ಕಂಪನದಿಂದಾಗಿ ಹೆಡೆಯ ಮಣಿಗಳೆಲ್ಲ ಪಾತಾಳ ರಂಧ್ರದೊಳಕ್ಕೆ ಉದುರಿಹೋದವು. (೨೪ ನೆಯದರಲ್ಲಿ ನೃತ್ಯದ ಪ್ರಸ್ತಾವ ಇಲ್ಲ.)

೨೫. ಶ್ವೇತವರ್ಣದ ಅಂಗರಾಗಗಳ ಅವನ ತೋಳುಗಳು "ಕರವರ್ತನಾ" (ಬೆರಳುಗಳ ಅಭಿನಯ)ಗಳ ಕಾರಣದಿಂದಾಗಿ ಆಕಾಶದಲ್ಲಿ ಬಿಳುಪಾದ ಮೋಡರಾಶಿಗಳಂತೆ ಕಾಣಿಸುತ್ತಿತ್ತು.

೨೬. —

೨೭. ಅಂಗಹಾರ ಹಾಗೂ ಕರಣಗಳನ್ನು ಅಭಿನಯಿಸುತ್ತಿದ್ದ ಅವನ ಮುಂದೆ ಬೀಳುತ್ತಿದ್ದ ಮಂದಾಕಿನಿ, (ದೇವಗಂಗೆ) ಬಿಳಿ ಬಟ್ಟೆಯ ಪರದೆಯಂತೆ ತೋರುತ್ತಿದ್ದಳು.

೨೮. —

೨೯. ವಿವಿಧಾಭಿನಯಚಾತುರ್ಯವನ್ನು ತೋರಿಸಲು ಅವಕಾಶಮಾಡಿಕೊಳ್ಳಲೋ ಎಂಬಂತೆ ಶಿವನು ಹಸ್ತರೇಚಕಾಭಿನಯವನ್ನು ಪ್ರಾರಂಭಿಸುತ್ತ ಪರ್ವತಗಳನ್ನು ಚೂರುಚೂರು ಮಾಡಿದನು.

೩೦. ವಿವಿಧ ಅಂಗಹಾರ, ನೃತ್ತ ಹಸ್ತ ಇತ್ಯಾದಿಗಳಿಂದ ಭ್ರಮಣ ಮಾಡುತ್ತಿದ್ದ ಅವನು ಸುಳಿಗಳು ಇದ್ದ ಕ್ಷೀರಸಾಗರದಂತೆ ಕಾಣಿಸಿದನು.

೩೧. ಹಸ್ತಾಭಿನಯವನ್ನು ನಾನಾ ಪ್ರಕಾರವಾಗಿ ಮಾಡುತ್ತಿದ್ದ ಅವನ ಹಸ್ತಗಳು ಭುವನವೆಂಬ ತಾವರೆ ಬೀಜಕೋಶದ ಸಾವಿರಾರು ದಳಗಳಂತೆ ಭಾಸವಾಗುತ್ತಿದ್ದವು.

೩೨. ಅವನ ಮೇಲ್ಗಣ್ಣು ಸೂರ್ಯನಾಯಿತು. ಅದರ ಬೆಳಕಿನಿಂದ, ಹಸ್ತಾಭಿನಯದಲ್ಲಿ ತಲ್ಲೀನವಾಗಿದ್ದ ಅವನ–ಕೈಬೆರಳುಗಳೆಂಬ ದಳಗಳ–ಹಸ್ತಗಳು ಶೋಭಿಸಿದವು.

೩೪. ೩೫.

೩೬. ಅಂಗಹಾರ, ಕರಣಗಳಿಂದ ಅತಿ ವೇಗವಾಗಿ ತೋಳುಗಳನ್ನು ಬೀಸುತ್ತಿದ್ದ ಶಿವನು ಪ್ರಳಯಕಾಲದ ಮಾರುತಕ್ಕೆ ಕಂಪಿಸುವ ಕೈಲಾಸಪರ್ವತದಂತೆ ತೋರಿಬರುತ್ತಿದ್ದನು.

೩೭. ಅವನ ಬಾಹುದಂಡಗಳಿಂದ ಹಸ್ತಾಭಿನಯದ ಕಾಲದಲ್ಲಿ ಚಿಮ್ಮುತ್ತಿದ್ದ ಉಜ್ವಲವಾದ ಭಸ್ಮಕಣಗಳು, ಅವನ ನೃತ್ತದ ಭಾರಕ್ಕೆ ಯೋಗ್ಯವಾದ ಮತ್ತೊಂದು ಲೋಕವನ್ನು ಸೃಷ್ಟಿ ಮಾಡಲು ಬಳಸಲ್ಪಡುತ್ತಿವೆಯೋ ಎಂಬಂತಿದ್ದವು.

೩೮. ನರ್ತಿಸುತ್ತಿದ್ದ ಅವನ ಕೈಬೆರಳುಗಳ ತುದಿಗಳಿಂದ ಚಿಮ್ಮುತ್ತಿದ್ದ ಶ್ವೇತ ಕಾಂತಿಗಳು ಆಕಾಶದಲ್ಲಿ ಸಾವಿರಾರು ಚಂದ್ರನನ್ನು ಹೋಲುವ ಬಿಳಿ ಗುರುತುಗಳನ್ನು ಮೂಡಿಸುತ್ತಿದ್ದಂತೆ ತೋರಿಬಂದವು.

೩೯. ಗ್ರೀವಾರೇಚಕವನ್ನು ಅಭಿನಯಿಸುತ್ತಿದ್ದ ಶಿವನ ಜಟೆ, ನೀರುಗುಳ್ಳೆಗಳಿಂದ ತುಂಬಿದ ದೇವಗಂಗೆಗೆ ತಾಕಿತ್ತು. ಆಗ, ದೇವಗಂಗೆ ಜಟೆಯ ಮೇಲೆ ಬಿಗಿಯಾಗಿ ಕಟ್ಟಿದ ಹಾವಿನ ಪೊರೆಯಂತೆ ಕಾಣಿಸಲಾರಂಭಿಸಿತು.

೪೦. ಸಿಂಹದ ಚರ್ಮವನ್ನು ಶಿವನು ತೊಟ್ಟುಕೊಂಡಿದ್ದ. ಅವನ ಬಾಹುದಂಡಗಳ ಉಗ್ರಚಲನವಲನದಿಂದಾಗಿ ಆ ಸಿಂಹಚರ್ಮದಲ್ಲಿನ ಉಗುರುಗಳು ತಮ್ಮ ಮೇಲೆ ಬೀಳಬಹುದೆಂದು ದಿಗ್-ಗಜಗಳು ಮೊಳಕಾಲುಗಳನ್ನು ಕುಂಚಿತ ಮಾಡಿಕೊಂಡು ಗಾಬರಿಯಿಂದಿದ್ದವು.

೪೧. ಅವನ ಅಂಗಹಾರ ಕರಣಗಳಿಂದಾಗಿ ರಭಸದಿಂದ ಚಲನವಲನಗಳನ್ನು ಹೊಂದುತ್ತಿದ್ದ ಬಾಹುಗಳಿಗೆ ಅಂಟಿಕೊಂಡು (ಮೇಲಕ್ಕೆ ಎಗರುತ್ತಿದ್ದ) ಸಿಂಹದ ಚರ್ಮದ ಉಗುರು ನಕ್ಷತ್ರಗಳನ್ನು ಕೆಳಕ್ಕೆ ಎಳೆಯುತ್ತಿತ್ತು. ಇದು ನಕ್ಷತ್ರಗಳ ರಾಜ ಚಂದ್ರನಿಗೆ ಸಂತೋಷವುಂಟುಮಾಡುವುದಕ್ಕಿರಬಹುದು.

೪೨—

೪೩ — ತ್ರಿವಿಕ್ರಮಾವತಾರದ ಸಮಯದಲ್ಲಿ ವಿಷ್ಣುವಿನ ದಂಡಪಾದದ ಪ್ರಸಂಗದಲ್ಲಿ ಅವನ ಪಾದಗಳಿಗೆ ಬ್ರಹ್ಮ ಅರ್ಘ್ಯವರ್ಪಿಸಿದ್ದನಷ್ಟೆ! ಶಿವನ ದಂಡಪಾದ ಪ್ರಸಂಗದಲ್ಲಿ ವಿಷ್ಣು-ಪಾದ-ಅರ್ಘ್ಯ-ಸಮರ್ಪಕ ಬ್ರಹ್ಮನ ಮಣಿಮಯ ಕಮಂಡಲುವಿನಂತೆ ಸೂರ್ಯ ಕಾಣಿಸಿದ— ಶಿವನ ದಂಡಪಾದದ ಅಂಗುಲಿಗಳ ನಡುವೆ ಬಂದಿದ್ದರಿಂದಾಗಿ !

ದಿಙ್ಮಾತ್ರಕ್ಕಾಗಿ ಇಷ್ಟನ್ನು ಮಾತ್ರ ಇಲ್ಲಿ ಬರೆಯಲಾಗಿದೆ. ವಿಷ್ಣುತಾಂಡವ ಸ್ತೋತ್ರವೆಂಬ ಹೆಸರಿನ ಸ್ತೋತ್ರವನ್ನು ಯಾರೂ ಬರೆದಂತೆ ತೋರುವುದಿಲ್ಲ. ನಿಜವಾಗಿ ಹೇಳುವುದಾದಲ್ಲಿ ವಿಷ್ಣುವು ವೃತ್ತಿಗಳ ಜನಕನೆಂಬ ನಾಟ್ಯೋಚಿತವಾದ ಸೊಗಸಾದ

ಕಥೆಯೇ ನಾಟ್ಯಶಾಸ್ತ್ರದಲ್ಲಿದ್ದಾಗ್ಯೂ ಇದರ ಸಾಹಿತ್ಯಿಕ ಅಥವಾ ನೃತ್ಯೋಚಿತ ರಚನೆಗೆ ಯಾರೂ ಕೈಹಾಕದಿರುವುದು ಖೇದದ ಸಂಗತಿ. ವೇದಾಂತದೇಶಿಕಪ್ರಣೀತ ಯಾದವಾಭ್ಯುದಯದ ಕೃಷ್ಣನರ್ತನದ ಬಗೆಗೆ ಈಗಾಗಲೇ ಪ್ರಸ್ತಾವಿಸಿದೆ. ಅಲ್ಲಿ ಬರುವ 'ಚಾರೀ', ಕೆಲವು ಕಾವ್ಯಗಳಲ್ಲಿ ಬರುವ ಭವಾನಿಯ ಅಥವಾ ತ್ರಿವಿಕ್ರಮಾವತಾರದ 'ದಂಡಪಾದ' ಇಂಥ ಕೆಲವು ಉದಾಹರಣೆಗಳನ್ನು ಬಿಟ್ಟರೆ, ನೃತ್ಯಕ್ಕೆ ಅದರಲ್ಲೂ - ವಿಷ್ಣುವಿನ ನೃತ್ಯಕ್ಕೆ – ಶಾಸ್ತ್ರೀಯವಾದ ಪ್ರಾಯೋಗಿಕ ಹಿನ್ನೆಲೆಯಲ್ಲೂ ಸಾಹಿತ್ಯಿಕ ಗೌರವ ಸಂದಿರುವುದು ಕಡಮೆ.

ಈ ಹಿನ್ನೆಲೆಯಲ್ಲಿ ವಿಷ್ಣುವಿನ ಉದ್ಧತ ಪ್ರಾಯ ನೃತ್ಯದ ವರ್ಣನೆಯನ್ನು ಪ್ರಕೃತ ಲೇಖಕನ ಸ್ವಂತ ರಚನೆಯಾದ ಕೆಳಕಂಡ ಮೂರು ಪದ್ಯಗಳಲ್ಲಿ ನೋಡಬಹುದು :

೧. ಸಂಪ್ರಹಾರ ಸಮಯಾನುಸಾರಿಣೀ
ವಿಷ್ಣು ದೈತ್ಯ ವಲನಾವಲೀ ಬಭೌ ।
ಅಂಗಹಾರಕರಣಾಭಿನೀತಿಭಿ-
ರ್ನೃತ್ತತಾ–ಸಮರತೋಭಯಾದ್ಭುತಾ ॥

೨. ವಿಷ್ಣೋರ್ದೈತ್ಯೌ ಘೋರಮಾಕ್ರಮ್ಯ ತೋ ದ್ರಾಕ್
ಘಾತೇ ದಕ್ಷಃ ಸ್ಥಾನಕಪ್ರಾಪ್ತಿ ನಿಷ್ಠಃ ।
ನಾಲಾಂಭೋಜದ್ವಂದ್ವ ಸಾದೃಶ್ಯರಮ್ಯೋ
ದೇವಸ್ಫೂರ್ಜ ದ್ವಿಸ್ಮಯೋ ದಂಡಪಾದಃ ॥

೩. ವಿಷ್ಣೋಃ ಸಮೀಕ ಸಮಯೇ ಮಧುಕೈಟಭೌ ತೌ
ಆಕುಂಚನೈರ ಕುರುತಾಂ ನಿಜವರ್ಷ್ಮರಕ್ಷಾಮ್ ।
ಚಾರೀವಿಧಾನಬುಧ ಪಾದನಖಾಗ್ರರಶ್ಮಿ-
ರೇಖಾಭಿಚಿಂತಿತ ಭಯಂಕರ ಖಡ್ಗಧಾರಾ ॥

—o—

# ಪವಾಡ ಕಥೆಗಳ ಹಿನ್ನೆಲೆಯಲ್ಲಿ ಸಿದ್ಧರಾಮನ ಇತಿವೃತ್ತ ಹಾಗೂ ವ್ಯಕ್ತಿತ್ವ

---

ಡಾ|| ವ್ಹಿ.ಜಿ. ಪೂಜಾರ

ಭರತ ಭೂಮಿಯಲ್ಲಿ ಧಾರ್ಮಿಕ ಮಹಾಪುರುಷರು, ಜ್ಯೋತಿ ಸ್ವರೂಪರಾದ ವಿಭೂತಿಗಳು ಕಾಲಕಾಲಕ್ಕೆ ಜನಿಸಿ ತಮ್ಮ ಸ್ವಯಂ ಪ್ರಭೆಯಿಂದ ಬುವಿಗೆ ಬೆಳಕು ನೀಡುತ್ತ ಬಂದಿದ್ದಾರೆ. ತಾವು ನಡೆದ ಧರ್ಮದ, ಸತ್ಯದ ಆ ಬೆಳಕಿನಲ್ಲಿ ಜನತೆಯನ್ನು ಮುನ್ನಡೆಸಿ ಕೃತಾರ್ಥರಾಗಿದ್ದಾರೆ. ಅಂಥವರಲ್ಲಿ ಹನ್ನೆರಡನೇ ಶತಮಾನದ ಬಸವಾದಿ ಶರಣರು ಅಗ್ರಗಣ್ಯರು. ಸೊನ್ನಲಿಗೆಯನ್ನು ತನ್ನ ಕಾರ್ಯಕ್ಷೇತ್ರವನ್ನಾಗಿಸಿಕೊಂಡ ಶಿವಯೋಗಿ ಸಿದ್ಧರಾಮ ಶರಣರಲ್ಲಿ ಎದ್ದು ಕಾಣುವಂಥವ. 'ಪರೋಪಕಾರಾರ್ಥಮಿದಂ ಶರೀರಂ' ಎಂಬಂತೆ ಜನತೆಯ ಕಲ್ಯಾಣಕ್ಕಾಗಿ ಅನುಗಾಲವೂ ಶ್ರಮಿಸಿದ ಮಹಾತ್ಮ ಕೆರೆ ಬಾವಿಗಳನ್ನು ತೋಡಿಸುವುದರ ಮೂಲಕ ಜನಹಿತ ಕಾರ್ಯಗಳನ್ನು ಮಾಡಿದವ. 'ಸಾಕಾರದೊಳು ನಿಷ್ಠೆ, ಭೂತಂಗಳೊಳಗನುಕಂಪೆ, ಅನುಗೊಂಬನಿತು ಕಾಯಕ. ಎಂಬುದು ಆತನ ಜೀವನಸಿದ್ಧಾಂತ. ಕರ್ಮಯೋಗಿಯಾಗಿ, ವೈರಾಗ್ಯನಿಧಿಯಾಗಿ ಶ್ರೇಷ್ಠ ವಚನಕಾರನಾಗಿ ಇವೆಲ್ಲಕ್ಕೂ ಮಿಗಿಲಾಗಿ ಸಮಾಜದ ಹಿತಚಿಂತಕನಾಗಿ ಬಾಳಿದ ಸಿದ್ಧರಾಮ ಕನ್ನಡಿಗರ ಅಚ್ಚುಮೆಚ್ಚಿನ ಶರಣನಾಗಿದ್ದಾನೆ.

ಹೀಗೆ ಐತಿಹಾಸಿಕ ಧಾರ್ಮಿಕ ಮಹಾಪುರುಷನಾದ ಸಿದ್ಧರಾಮನ ಚರಿತ್ರೆ ಕನ್ನಡ ಸಾಹಿತ್ಯದ ಅನೇಕ ಕಾವ್ಯ, ಪುರಾಣಗಳಲ್ಲಿ ಚಿತ್ರಣಗೊಂಡಿದೆ. 'ಸಿದ್ಧರಾಮಚಾರಿತ್ರ' ಆತನನ್ನೇ ಕುರಿತು ರಚನೆಗೊಂಡ ಪುರಾಣ ಕಾವ್ಯ. ಇನ್ನಿತರ ವೀರಶೈವ ಕಾವ್ಯ, ಪುರಾಣಗಳಲ್ಲಿ ಆತನ ಚರಿತ್ರೆ ಪ್ರಾಸಂಗಿಕವಾಗಿ ಕಾಣಿಸಿಕೊಂಡಿದೆ. ಈ ಎಲ್ಲ ಕೃತಿಗಳಲ್ಲಿ ಆತ ಕರ್ಮಯೋಗಿಯಾಗಿ ಚಿತ್ರಣಗೊಂಡಂತೆ ಒಬ್ಬ ಪವಾಡ ಪುರುಷನಾಗಿಯೂ ವರ್ಣಿತಗೊಂಡುದನ್ನು ಕಾಣುವೆವು. ಆತನ ಚರಿತ್ರೆಯಲ್ಲಿ ಹಾಸುಹೊಕ್ಕಾಗಿ ಬೆರೆತು ವರ್ಣನೆಗೊಂಡ ಪವಾಡ ಕಥೆಗಳೆಲ್ಲ ಸಾಂಕೇತಿಕ ಅರ್ಥವನ್ನು ಹೊಂದಿದಂಥವು. ಇಲ್ಲಿ ಅವುಗಳ ಸಾಂಕೇತಿಕತೆಯನ್ನು ತಿಳಿಯುವುದಕ್ಕಿಂತ

ಮೊದಲು ಅವು ಧಾರ್ಮಿಕ ಮಹಾಪುರುಷರ ಚರಿತ್ರೆಯಲ್ಲಿ ಹೇಗೆ ಸೇರಿಕೊಳ್ಳುತ್ತವೆ ? ಅವುಗಳ ಹಿನ್ನೆಲೆ ಹಾಗೂ ಔಚಿತ್ಯವೇನು ? ಎಂಬುದನ್ನಿಲ್ಲಿ ನೋಡಬಹುದು.

ಧಾರ್ಮಿಕ ಮಹಾಪುರುಷರನ್ನು ಕುರಿತು ಕಾವ್ಯ ಪುರಾಣಗಳಲ್ಲಿ ಪವಾಡಗಳನ್ನು ಸೇರಿಸಿ ವರ್ಣಿಸುವುದು ಭಾರತೀಯ ಪುರಾಣಕಾರರ ಸಂಪ್ರದಾಯವೇ ಆಗಿದೆ ಎನ್ನಬಹುದು. ಭಾರತದಲ್ಲಿ ಬಾಳಿ ಬೆಳಗಿದ ಅನೇಕ ಧಾರ್ಮಿಕ ಮಹಾಪುರುಷರು, ಶರಣರು ಗಣನೆಗೂ ನಿಲುಕದಷ್ಟು ಪವಾಡಗಳನ್ನು ಎಸಗಿದರೆಂದು ವರ್ಣಿಸಿದ್ದನ್ನು ಸಾಮಾನ್ಯವಾಗಿ ಎಲ್ಲ ಧಾರ್ಮಿಕ ಪುರಾಣಗಳಲ್ಲೂ ಕಾಣುವೆವು. ಆದರೆ ಪವಾಡಗಳಂಥ ವಿಸ್ಮಯಕಾರಿ ಸಂಗತಿಗಳು ನಮಗಿಂದು ವಿಚಾರದ ಹಿಡಿತಕ್ಕೆ ಸಿಗದಾಗಿವೆ, ವಿಮರ್ಶೆಗೂ ನಿಲುಕದಾಗಿವೆ. ಬುದ್ಧಿಗೂ ತರ್ಕಕ್ಕೂ ಹೊಳೆಯುವ ಸಂಗತಿಗಳನ್ನಷ್ಟೇ ನಾವಿಂದು ನಂಬುತ್ತಲಿದ್ದೇವೆ. ವೈಜ್ಞಾನಿಕ ಯುಗದಲ್ಲಿರುವ ನಮಗಿದು ಸಹಜ. ಆದರೆ ವಿಜ್ಞಾನಕ್ಕೂ ನಿಲುಕದ ಎಷ್ಟೋ ಶಕ್ತಿಗಳಿವೆಯೆಂದು ಬಲ್ಲವರು ಹೇಳುತ್ತಾರೆ. ಆದರೆ ಅವನ್ನೆಲ್ಲ ಅರಿಯಲು ನಮಗಿಂದು ಸಹನೆಬೇಕು, ಆಳವಾದ ಅಧ್ಯಯನ ಬೇಕು. ಇದೇನೇ ಇರಲಿ ಕಾವ್ಯ ಪುರಾಣಗಳಲ್ಲಿ ವರ್ಣನೆಗೊಂಡ ಪವಾಡಗಳನ್ನೆಲ್ಲ ನೋಡಿದಾಗ ಇವುಗಳ ಹಿಂದೆ ಒಂದು ವಿಧದ ಸಾಂಕೇತಿಕ ಅರ್ಥ ಇರುವುದು ಸ್ಪಷ್ಟ. ಇದನ್ನು ನಾವಿಂದು ಅರಿಯಬೇಕಾಗಿದೆ. ಇದನ್ನು ತಿಳಿಯುವ ಸಹನೆಯಿಲ್ಲದವರಿಗೆ ಪವಾಡಗಳು ಒಂದು ಬಗೆಯ ಅಲರ್ಜಿಯಾಗಿವೆ. ಪುರಾಣಕಾರರು ಧಾರ್ಮಿಕ ಮಹಾಪುರುಷರ ವ್ಯಕ್ತಿತ್ವ, ಮಹಿಮೆ ಹಾಗೂ ಧರ್ಮದ ತತ್ವಗಳ ಘನತೆಯನ್ನು ಸಾಮಾನ್ಯ ಜನತೆಗೆ ಪರಿಣಾಮಕಾರಿಯಾಗಿ ತಿಳಿಸಲೋಸುಗ ಪವಾಡಗಳನ್ನು ವರ್ಣಿಸಿರುವಂತಿದೆ. ಭಾರತೀಯ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ, ಅಷ್ಟಾದಶ ಪುರಾಣ, ಬೈಬಲ್, ವೀರಶೈವ ಪುರಾಣಗಳು – ಮುಂತಾದವುಗಳಲ್ಲಿ ಪವಾಡಗಳು ಕಿಕ್ಕಿರಿದು ವರ್ಣನೆಗೊಂಡುದು ಈ ಉದ್ದೇಶದಿಂದಲೇ. ಯೇಸು, ಕಬೀರ, ಪೈಗಂಬರ, ಬುದ್ಧ, ಬಸವಣ್ಣ ಹಾಗೂ ಸಿದ್ಧರಾಮ ಮುಂತಾದವರ ಚರಿತ್ರೆ ಪವಾಡಗಳಿಂದ ಹೊರಗುಳಿದಿಲ್ಲ. "The founders of all religions are at the centre of great miracle cycles".[1]

ನಮ್ಮ ಕವಿಗಳು, ಪುರಾಣಕಾರರು ವ್ಯಕ್ತಿಯ ಚರಿತ್ರೆಯ ವಿವರಗಳಿಗಿಂತ ಚಾರಿತ್ರ್ಯಕ್ಕೇ ಬೆಲೆ ಕೊಟ್ಟವರು. ಚರಿತ್ರೆಯಿದ್ದರೂ ಅದನ್ನು ಪುರಾಣವಾಗಿಸಿ ಬಿಡುವಲ್ಲಿ ನಿಸ್ಸೀಮರು. ಪುರಾಣವೆಂದಾಗ ಅದರಲ್ಲಿ ಸಾಮಾನ್ಯಜನರಿಗೆ ಇಷ್ಟವಾಗುವ ಕಥೆ, ಉಪಕಥೆ, ಪವಾಡಗಳು ಸೇರಿಕೊಳ್ಳುವುದು ಸಹಜ. ಸಾಮಾನ್ಯರಿಗೆ

---

1. Encyclopaedia of Britanica Vol 12

ಧರ್ಮದ ತತ್ವಗಳನ್ನು ಸರಳಗೊಳಿಸಿ ತಿಳಿಸಲು ಅಂದು ಪುರಾಣಕಾರರಿಗೆ ಪವಾಡಗಳೇ ಸರಿಯಾದ ಮಾಧ್ಯಮವೆಂದು ತೋರಿದಂತಿದೆ. ಮತಗಳ ಇತಿಹಾಸವನ್ನು ನೋಡಿದಾಗ ಮೊದಲಿನಿಂದಲೂ ಸಮಾಜದಲ್ಲಿ ಎರಡು ರೀತಿಯ ಜನರಿದ್ದುದು ನಮ್ಮ ಗಮನಕ್ಕೆ ಬರುತ್ತದೆ. ಒಂದು, ಸಾಮಾನ್ಯ ಜನ, ಇನ್ನೊಂದು ಸುಶಿಕ್ಷಿತ ಜನ. ಸುಶಿಕ್ಷಿತರು ಧಾರ್ಮಿಕ ತತ್ವಗಳನ್ನು ತರ್ಕಬದ್ಧವಾದ ರೀತಿಯಲ್ಲಿ ವಾದಿಸಿ, ವಿಶ್ಲೇಷಿಸಿ ಗ್ರಹಿಸಬಲ್ಲವರಾಗಿರುತ್ತಾರೆ. ಎಂಥ ಗಹನ (abstract) ವಾದ ತತ್ವಗಳೂ ಅವರಿಗೆ ಸುಲಭವಾಗಿ ತಿಳಿಯುವವು. ಸಾಮಾನ್ಯ ಜನತೆಗಾದರೋ ಇಂಥ ಶಕ್ತಿ ಇರದು. ತಾರ್ಕಿಕ ಜಟಿಲತೆ, ಧರ್ಮದ ತತ್ವಗಳ ಗಹನತೆ ಅವರಿಗೆ ಅರ್ಥವಾಗವು. ಇವೆಲ್ಲ ಸಾಮಾನ್ಯ ಜನತೆಗೆ ಸುಲಭವಾಗಿ ತಿಳಿಯಲೆಂದು ಪುರಾಣಕಾರರು ಅಮೂರ್ತ ತತ್ವಗಳ ಸ್ಥಾನದಲ್ಲಿ ವಸ್ತು, ವ್ಯಕ್ತಿ ಹಾಗೂ ಘಟನೆಗಳನ್ನು ಬಳಸಿ ಪವಾಡಗಳನ್ನು ರಚಿಸುತ್ತ ಬಂದಂತಿದೆ. ಇದನ್ನು ಚೆನ್ನಾಗಿ ಗುರುತಿಸಿದ ಸಿಸಿರೋ ಎಂಬ ತತ್ವಜ್ಞಾನಿ "The miracle stories are necessary for the piety of ignorant folk"[2] ಎಂದುದನ್ನಿಲ್ಲಿ ಸ್ಮರಿಸಬಹುದು. ಜನತೆಯೂ ಪವಾಡಗಳನ್ನು ಪ್ರದರ್ಶಿಸಿದವರೇ ಧಾರ್ಮಿಕ ಮಹಾಪುರುಷರೆಂದು ನಂಬುತ್ತದೆ. ಭಾರತೀಯ ಜನತೆಯ ಈ ನಂಬುಗೆಯ ಕಾರಣವಾಗಿ ನಮ್ಮಲ್ಲಿ ಪವಾಡಗಳು ಉಳಿದುಕೊಂಡಿವೆ. ಇವೆಲ್ಲ ಅರ್ಥವಿಲ್ಲದವು ಎಂದು ಸಾರಾಸಗಟಾಗಿ ತಳ್ಳಿಹಾಕುವುದು ಸರಿಯಲ್ಲ, ಎಲ್ಲವನ್ನೂ ನಂಬಿ ಸ್ವೀಕರಿಸುವುದೂ ಸಾಧುವಲ್ಲ. ಇವುಗಳ ಹಿಂದಿರುವ ಧ್ಯೇಯವನ್ನು ಅರಿತುಕೊಳ್ಳಬೇಕಷ್ಟೇ. ಒಂದರ್ಥದಲ್ಲಿ ಪವಾಡಗಳೆಂದರೆ ಸತ್ಯದ ಶ್ರೀಮುಖಕ್ಕೆ ಮುಚ್ಚಿದ ಮುಚ್ಚಳಗಳೇ ಆಗಿವೆಯೆನ್ನಬಹುದು. ಆ ಮುಚ್ಚಳಗಳನ್ನು ಅಂದರೆ ಅದ್ಭುತ ಸಂಗತಿಗಳನ್ನು ಓರೆ ಮಾಡಿನೋಡಿದಾಗ ಸತ್ಯರೂಪಿ ತತ್ವಗಳು ನಮ್ಮ ಗಮನಕ್ಕೆ ಗೋಚರವಾಗುತ್ತವೆ.

ಸಿದ್ಧರಾಮನ ಕುರಿತಿದ್ದ ಪವಾಡಗಳನ್ನೆಲ್ಲ ನಾವು ಈ ಹಿನ್ನೆಲೆಯಲ್ಲಿಯೇ ಅಧ್ಯಯನ ಮಾಡಿ ಅವು ಒಳಗೊಂಡ ಸಾಂಕೇತಿಕತೆಯನ್ನು ಗುರುತಿಸಬೇಕಾಗಿದೆ. ರಾಘವಾಂಕನ 'ಸಿದ್ಧರಾಮ ಚಾರಿತ್ರ' ದಲ್ಲಿ ಹಾಗೂ ಇನ್ನಿತರ ಪುರಾಣ ಕೃತಿಗಳಲ್ಲಿ ಸಿದ್ಧರಾಮನನ್ನು ಕುರಿತು ಅನೇಕ ಪವಾಡಗಳು ವರ್ಣಿತಗೊಂಡಿದ್ದು, ಇವೆಲ್ಲ ಆತನ ವ್ಯಕ್ತಿತ್ವದ ಹಲವು ಮುಖಗಳಿಗೆ ಹಿಡಿದ ಕನ್ನಡಿಯಂತಿವೆ. ಆತ ಕಾಯಕ ಜೀವಿ, ಕರ್ಮಯೋಗಿ ಹಾಗೂ ಜೀವದಯಾಪರನೆಂಬುವನ್ನು ಸಾಂಕೇತಿಕಾರ್ಥವಲ್ಲಿ ವರ್ಣಿಸಿವೆ. ಒಟ್ಟಿನಲ್ಲಿ ಆತನ ಅಂತರಂಗದ ಭಾವನೆಗಳು ಪವಾಡಗಳ ಮೂಲಕ ಬಹಿರಂಗಗೊಂಡಿವೆಯೆನ್ನಬಹುದು.

ಸಿದ್ಧರಾಮ ಶಿವನಿಂದ ಹಣೆಗಣ್ಣು ಪಡೆದ ಯೋಗಿ. ಆತ ತನ್ನ ಯೌಗಿಕ

---

2. Encyclopaedia of Britanica Vol-12

ಶಕ್ತಿಯಿಂದ ಅನೇಕ ಅಘಟಿತ ಘಟನೆಗಳನ್ನು ಮಾಡಿದನೆಂದು ಕವಿಗಳು ಬಣ್ಣಿಸಿದ್ದಾರೆ. ಅಂದು ಸಿದ್ಧರಾಮನ ಸಹಜ, ದೈನಂದಿನ ಕೆಲಸ ಕಾರ್ಯಗಳೂ ಅವರಿಗೆ ಪವಾಡ ಸದೃಶವಾಗಿ ಕಂಡಿವೆ. ಅವರ ಭಾವುಕ ಮನಸ್ಸು ಇಲ್ಲಿ ಕೆಲಸ ಮಾಡಿದೆ. ಮಾನವ ಕೇವಲ ಬುದ್ಧಿಜೀವಿಯಷ್ಟೇ ಅಲ್ಲ, ಭಾವನಾಜೀವಿಯೂ ಆಗಿದ್ದಾನೆ. ಪವಾಡಗಳ ಹುಟ್ಟಿನ ಹಿಂದೆ ಇಲ್ಲಿ ಪುರಾಣಕವಿಗಳ ಭಾವುಕ ಮನಸ್ಸೂ ಮಹತ್ವದ ಪಾತ್ರ ವಾಡಿದೆ. ಸಿದ್ಧರಾಮನ ಸರ್ವಭೂತದಯಾಪರತ್ವವನ್ನು ಆತನ ಅಲೌಕಿಕ ವ್ಯಕ್ತಿತ್ವವನ್ನು ಎತ್ತಿ ತೋರಿಸುವುದು ಪುರಾಣಕಾರರ ಧ್ಯೇಯವಾಗಿರುವಂತಿದೆ. ಸಿದ್ಧರಾಮನ ಅಲೌಕಿಕ ರೀತಿಯ ಜನನ, ಆತ ಬಾಲ್ಯದಲ್ಲಿಯೇ ಶಿವನನ್ನು ಸಾಕ್ಷಾತ್ಕಾರ ಮಾಡಿಕೊಂಡುದು, ಆತನ ವ್ಯಕ್ತಿತ್ವ ಮಹಿಮೆ ಸೊನ್ನಲಾಪುರದ ತೀರ್ಥ ಹಾಗೂ ಕ್ಷೇತ್ರ ಮಹಿಮೆ, ಆತನ ಯೋಗ ಸಿದ್ಧಿಯ ಮಹತ್ವ, ಜೀವದಯೆ, ಮಾನವೀಯತೆ-ಹೀಗೆ ಆತನ ಕುರಿತಿದ್ದ ಎಲ್ಲ ಪವಾಡಗಳನ್ನು ಅಧ್ಯಯನದ ಅನುಕೂಲತೆಗಾಗಿ ವಿಂಗಡಿಸಿ ಅವುಗಳನ್ನು ಗುರುತಿಸಬಹುದು.

### ೧. ಸಿದ್ಧರಾಮನ ಅಲೌಕಿಕ ಜನನ :

ಅಲೌಕಿಕ ಜನನವು ಲೋಕ ವಿಲಕ್ಷಣವಾದುದು. ಭೌತಿಕ ಜಗತ್ತಿನ ನಿಸರ್ಗದ ನಿಯಮಗಳಿಗೆ ಹೊರತಾದುದು. ಧಾರ್ಮಿಕ ಮಹಾಪುರುಷರು ಮಾತ್ರ ಅಲೌಕಿಕ ರೀತಿಯಿಂದ ಜನಿಸಿದರೆಂದು ಜನತೆಯ ನಂಬುಗೆ. ಈ ನಂಬುಗೆ ಭಾರತೀಯರಲ್ಲಿ ಗಟ್ಟಿಗೊಂಡಿದೆ. "A wonder birth or supernatural birth is one of the commonest ideas in folk tale and myth." [3] ಪುರಾಣಗಳಲ್ಲಿ ಈ ಬಗೆಗಿನ ವರ್ಣನೆ ಸಾಮಾನ್ಯವಾದುದು. ಧಾರ್ಮಿಕ ಮಹಾಪುರುಷರೆಲ್ಲರೂ ಅಲೌಕಿಕ ರೀತಿಯಿಂದಲೇ ಜನಿಸಿದವರೆಂದು ವರ್ಣಿತರಾಗಿದ್ದಾರೆ. ಬುದ್ಧ ತನ್ನ ತಾಯಿಯಾಗಲಿರುವವಳ ಕನಸಿನಲ್ಲಿ ಬಿಳಿಯ ಆನೆಯಾಗಿ ಕಾಣಿಸಿಕೊಂಡು, ಅವಳ ಗರ್ಭವನ್ನು ಪ್ರವೇಶಿಸಿ ಜನಿಸಿದನೆಂದು ವರ್ಣಿತವಾದರೆ, [4] ಯೇಸುವು ತನ್ನ ತಾಯಿಯು ಇನ್ನೂ ಕನ್ಯೆಯಾಗಿರುವಾಗಲೇ ಜನಿಸಿದನೆಂದು ಬೈಬಲ್ ವರ್ಣಿಸುತ್ತದೆ. [5] ಶಂಕರಾಚಾರ್ಯರ ಜನನವು ವೃಷಭಾಚಲೇಶ್ವರನ ಚಿತ್ಕಳೆಯು ಅವರ ತಾಯಿಯ ಗರ್ಭ ಸೇರುವುದರಿಂದ

3. Encyclopaedia of Religion and Ethics Vol–12, Page-624.
4. Encyclopaedia of Religion and Ethics. Vol–12, Page-624.
5. ಸತ್ಯವೇದವು (ಹೊಸ ಒಡಂಬಡಿಕೆ) ಪುಟ 3-4, Saint Mathew.

ಸಂಭವಿಸಿತೆಂದು ಹೇಳಿದೆ.[6] ನಂದಿಯು ಪ್ರಸಾದದಿಂದ ಬಸವಣ್ಣ[7], ಜಂಗಮರ ಪ್ರಸಾದದಿಂದ ಚನ್ನ ಬಸವಣ್ಣ,[8] ಜನಿಸಿದರೆಂದು ವೀರಶೈವ ಪುರಾಣಗಳು ವರ್ಣಿಸಿವೆ. ಸಿದ್ಧರಾಮನೂ ಹೀಗೆಯೇ ಅಲೌಕಿಕ ರೀತಿಯಿಂದ ಜನಿಸಿದವನೆಂದು ವರ್ಣಿಸಿದೆ. ಅದು ಹೀಗಿದೆ : ರೇವಣಸಿದ್ಧನು ಸುಗ್ಗವ್ವೆಯ ಉದರವನ್ನು ಮುಟ್ಟಿ ನಮಸ್ಕರಿಸಿ, "ತಾಯಿ, ನಿಮಗೆ ಒಬ್ಬ ಶಿವಯೋಗಿ ಪುತ್ರನಾಗುವನು" ಎನ್ನುವನು. ಆಗ ಆಕೆ "ನನಗೆ ವಯಸ್ಸಾಗಿದೆ, ಮುಟ್ಟು ನಿಂತಿದೆ, ಅವು ಹೇಗೆ ನನಗೆ ಮಗ ಹುಟ್ಟುತ್ತಾನೆ "? ಎಂದು ಮರಳಿ ಪ್ರಶ್ನಿಸಲು, ದಂಪತಿಗಳ ವಿರಹದನುಭವದ ಹೇಯದಲ್ಲಿ ಎಲ್ಲರಂತೆ ನಿಮಗೆ ಹುಟ್ಟನು. ಅಲೌಕಿಕ ರೀತಿಯಲ್ಲಿ ಶಿವಯೋಗಿಯಾದ ಪುತ್ರ ಜನಿಸುವನು" ಎಂದು ಹೇಳಿ ಹೋಗುವನು. ಇತ್ತ ಸುಗ್ಗವ್ವೆಗೆ ಗರ್ಭವಾಗುವುದು. ಆಕೆ ಐದು ತಿಂಗಳಲ್ಲೇ ಸಿದ್ಧರಾಮನಿಗೆ ಜನ್ಮ ನೀಡುವಳು.[9]

ಸಾಮಾನ್ಯರ ಜನನಕ್ಕೂ, ಧಾರ್ಮಿಕ ಮಹಾಪುರುಷರ ಜನನಕ್ಕೂ ವ್ಯತ್ಯಾಸ ವಿದೆಯೆಂಬುದನ್ನು ಈ ಮೇಲಿನ ಪವಾಡಗಳು ಸಾರುವುದರ ಮೂಲಕ ಧಾರ್ಮಿಕ ಮಹಾಪುರುಷರು ಅಸಾಮಾನ್ಯರಾದವರೆಂಬುದನ್ನು ತೋರಿಸಿವೆ. ಇವರ ಜನನ ಸಾಮಾನ್ಯರಂತೆ ರಕ್ತ ಮಾಂಸಗಳಿಂದ ಕೂಡಿದ ಶರೀರದಿಂದ ಆದಂಥದಲ್ಲ. ಹೀಗಾದರೆ ಅದು ಶ್ರೇಷ್ಠವಾದುದಲ್ಲ ಎಂದು ಜನ ಭಾವಿಸಿರುನಂತಿದೆ. ಮಹಾಪುರುಷರು ಅಲೌಕಿಕ ರೀತಿಯಿಂದ ಜನಿಸಿದರೇನೇ ಅವರು ಶ್ರೇಷ್ಠರೆಂದೂ ಜನರು ಭಾವಿಸುತ್ತಾರೆ. ಇದನ್ನು ಪುರಾಣಕಾರರು ತಿಳಿದು ಧಾರ್ಮಿಕ ಮಹಾಪುರುಷರು ಅಲೌಕಿಕ ರೀತಿಯಿಂದ ಜನಿಸಿದವರು ಎಂದು ವರ್ಣಿಸುತ್ತ ಬಂದಂತಿದೆ.

### ೨. ಸಿದ್ಧರಾಮ ಬಾಲ್ಯದಲ್ಲಿಯೇ ಶಿವನನ್ನು ಸಾಕ್ಷಾತ್ಕರಿಸಿ ಕೊಂಡುದು :

'ಬೆಳೆಯುವ ಸಿರಿ ಮೊಳಕೆಯಲ್ಲಿ ಕಾಣು' ಎಂಬಂತೆ ಬಾಲ್ಯದಲ್ಲಿಯೇ ಸಿದ್ಧರಾಮ ಶಿವತೇಜಃಪುಂಜದಂತೆ ಬೆಳೆಯತೊಡಗಿದ. 'ಬಾಲ್ಯದ ಮರೆಯ ಪರಬೊಮ್ಮ'ನೇ ಆದ ಆತ ಲೌಕಿಕರ ಕಣ್ಣಿಗೆ ಮರುಳನಂತೆ ಕಾಣಿಸಿದ. ಆತನ ತಾಯ್ತಂದೆಗಳು ಸುಮ್ಮನೇ ಕುಳಿತುಕೊಳ್ಳುತ್ತಿರುವ ಆತನನ್ನು ಮರುಳನೆಂದು ಭಾವಿಸಿದರು. ದನ ಕಾಯಲಾದರೂ ಕಳಿಸಿದರೆ ಸರಿಯಾಗಬಹುದೆಂದು ಕಳಿಸಿದರು. ದನಗಳನ್ನು

---

6. 'ಶ್ರೀ ಶಂಕರ ವಿಜಯ' ಪ್ರಕರಣ–2, ಪುಟ : 17-19
7. 'ಬಸವ ಪುರಾಣ' ಸಂಧಿ : 2, ಪದ್ಯ 54–57
8. 'ಶಿವ ತತ್ವ ಚಿಂತಾಮಣಿ'. ಸಂಧಿ : 31, ಪದ್ಯ : 70
9. 'ಸಿದ್ಧರಾಮ ಚಾರಿತ್ರ' ಸಂಧಿ–1, ಪದ್ಯ : 39–57

ಮೋಯಿಸಲು ಒಪ್ಪದ ಸಿದ್ಧರಾಮನು ಒಂದೆಡೆ ಬಿಟ್ಟು ಧ್ಯಾನದಲ್ಲಿ ತಲ್ಲೀನನಾಗತೊಡಗಿದ. ಒಂದು ದಿನ ಶಿವ ಆತನನ್ನು ಪರೀಕ್ಷಿಸಲೆಂದು ಜಂಗಮ ವೇಷದಲ್ಲಿ ಬಂದು "ನನಗೆ ತಿನ್ನಲು ಮಂಜಕ್ಕಿಬೇಕು, ಮನೆಗೆ ಹೋಗಿ ತಂದುಕೊಡು" ಎನ್ನುವನು. ಆಗಲಿ ಎಂದು ಸಿದ್ಧರಾಮ ಮನೆಗೆ ಹೋಗಿ ಅದನ್ನು ತಾಯಿಯಿಂದ ಪಡೆದು ತರುವಷ್ಟರಲ್ಲಿ ಆ ಜಂಗಮ ಅಲ್ಲಿರಲಿಲ್ಲ. ಮಲ್ಲಯ್ಯ ಮಲ್ಲಯ್ಯ ಎಂದು ಕರೆದರೂ ಆತ ಬರಲಿಲ್ಲ. ಎಲ್ಲೂ ಕಾಣಿಸಲಿಲ್ಲ. ಶ್ರೀಶೈಲಕ್ಕೆ ಹೊರಟ ಯಾತ್ರಿಕರು ಸಿದ್ಧರಾಮನಿಗೆ 'ನಿನಗೆ ಮಲ್ಲಯ್ಯನನ್ನು ತೋರಿಸುತ್ತೇವೆ ನನ್ನೊಡನೆ ಬಾ' ಎಂದು ಕರೆದೊಯ್ದರು. ಅಲ್ಲಿ ಲಿಂಗವನ್ನು ತೋರಿಸಲು, ನಾ ನೋಡಿದ ಮಲ್ಲಯ್ಯ ಈತನಲ್ಲನೆಂದು ಹಲುಬತೊಡಗಿದ. ಆತನನ್ನು ಎಲ್ಲಾ ಕಡೆಗೆ ಹುಡುಕಿದ. ಕೊನೆಗೆ ಆತ ಸಿಗದಾಗಲು ಕಮರಿ ನೆತ್ತಿಯಲ್ಲಿ ನಿಂತು ಕೆಳಗೆ ಬೀಳಬೇಕೆನ್ನುವಷ್ಟರಲ್ಲಿ ಶಿವನು ಪ್ರತ್ಯಕ್ಷನಾಗಿ ಆತನನ್ನು ಎತ್ತಿ ಸಂತೈಸಿದನು ಎಂದು ವರ್ಣಿಸಲಾಗಿದೆ.[10]

ಭಕ್ತನ ಮುಗ್ಧ ಹಾಗೂ ನಿಷ್ಕಪಟ ಭಕ್ತಿಗೆ ಶಿವನು ಪ್ರತ್ಯಕ್ಷನಾಗುತ್ತಾನೆ ಎಂಬ ತತ್ವವಿಲ್ಲಿ ಅಡಕಗೊಂಡಿದೆ. "Ultimate truth is God" ಎನ್ನುವಂತೆ ಆತ್ಯಂತಿಕವಾದ ಸತ್ಯ, ದೇವನೇ ಆಗಿದ್ದಾನೆ. ಭಕ್ತರ ಸಂಕಷ್ಟಗಳನ್ನು ಪರಿಹರಿಸುವುದು ಆತನಿಗೆ ಪ್ರಿಯವಾದ ಕೆಲಸ. ಆತ ಯಾವುದೇ ರೂಪದಲ್ಲಿ ಪ್ರಕಟಗೊಂಡು ತನ್ನ ಭಕ್ತರನ್ನು ಕಾಪಾಡುತ್ತಾನೆಂಬ ನಂಬಿಕೆ ಭಾರತೀಯರದು. ಇಂಥ ನಂಬುಗೆ ಇಲ್ಲಿ ಪವಾಡ ರೂಪ ತಳೆದು ಸಾಕಾರಗೊಂಡಿದೆ.

ಶಿವನ ಕೃಪೆಗೆ ಪಾತ್ರನಾದ ಸಿದ್ಧರಾಮ ನಿತ್ಯ ಕೈಲಾಸಕ್ಕೂ ಹೋಗಿ ಬರುತ್ತಿದ್ದನೆಂದು 'ಬಸವ ಪುರಾಣ'ದಲ್ಲಿ ವರ್ಣಿಸಿದೆ. ಬಸವಣ್ಣನ ಸರ್ವಾಂತರ್ಯಾಮಿ **(omnipresence personality)** ವ್ಯಕ್ತಿತ್ವದ ಪ್ರಕಟನೆಗಾಗಿ ಪುರಾಣಕಾರರು ಸಿದ್ಧರಾಮ ಕೈಲಾಸಕ್ಕೆ ಹೋಗಿ ಬರುವ ವಿಷಯವನ್ನು ಬಳಸಿಕೊಂಡದ್ದುಂಟು. ಅದು ಹೀಗಿದೆ : ಒಮ್ಮೆ ಸೊನ್ನಲಾಪುರದ ಶಿವಭಕ್ತರು ಸಿದ್ಧರಾಮನಿಗೆ "ನೀವು ನಿತ್ಯ ಕೈಲಾಸಕ್ಕೆ ಹೋಗಿ ಬರುತ್ತೀರಂತೆ ! ಅಲ್ಲಿ ಬಸವನಿದ್ದಾನೆಯೇ ?" ಎಂದು ಕೇಳಿದರು. "ಶಿವನನ್ನು ವಿಚಾರಿಸಿಕೊಂಡು ಬಂದು ನಿಮಗೆ ತಿಳಿಸುವೆ"ನೆಂದು ಹೇಳಿ ಸಿದ್ಧರಾಮ ಕೈಲಾಸಕ್ಕೆ ಹೋಗುವನು. ಅಲ್ಲಿ ಶಿವನನ್ನು ಕೇಳಲು ಆತ, ಆ ಲೋಕ ಈ ಲೋಕ ಎಂದೇನು ? ಯಾವ ಲೋಕದಲ್ಲಿ ಬಸವನಿಲ್ಲ ? ಎನ್ನುತ್ತ ತನ್ನ ಹೃದಯವನ್ನು ಬಗಿದು ಬಸವನನ್ನು ತೋರಿಸಿದ. ಇದನ್ನು ಕಂಡು ಸಿದ್ಧರಾಮ ಸೊನ್ನಲಾ

10. 'ಸಿದ್ಧರಾಮ ಚಾರಿತ್ರ' ಸಂಧಿ : 2, ಪದ್ಯ : 30-69

ಪುರಕ್ಕೆ ಒಂದು ಭಕ್ತರಿಪುರು ತನ್ನ ಹೃದಯ ಒಗಿದು ಶಿವನು ಬಸವನನ್ನು ತೋರಿಸಿದಂತೆ ತಾನೂ ತೋರಿಸಿದನಂತೆ ! 11

ಈ ಪವಾಡವು ಬಸವಣ್ಣನ ಸರ್ವಾಂತರ್ಯಾಮಿ ವ್ಯಕ್ತಿತ್ವವನ್ನು ಸುರೂಪ (concrete) ಗೊಳಿಸಲು ವರ್ಣನೆಗೊಂಡುದು ಸ್ಪಷ್ಟ. ಸಿದ್ಧರಾಮನು ಮರ್ತ್ಯಲೋಕ, ದೇವಲೋಕಗಳನ್ನೆಲ್ಲ ಸಂಚರಿಸುವಂಥವ ಎಂಬುದು ಜನತೆಯ ನಂಬುಗೆ. ಪುರಾಣಕಾರರು ಇಂಥ ನಂಬುಗೆಗಳನ್ನು ಈ ಬಗೆಯ ಪವಾಡಗಳ ಮೂಲಕ ಪುಷ್ಟೀಕರಿಸಲು ಯತ್ನಿಸಿದ್ದಾರೆ. ಸಂದರ್ಭದಲ್ಲಿ, ಪವಾಡಗಳು ಜನತೆಯ ನಂಬುಗೆಯ ಆಧಾರದ ಮೇಲೆಯೇ ನಿಂತುಕೊಂಡಂಥವಾಗಿವೆಯೆಂಬುದು ಇಂಥಲ್ಲಿ ದೃಢಗೊಳ್ಳುತ್ತದೆ.

೩. ಸಿದ್ಧರಾಮನ ವ್ಯಕ್ತಿತ್ವ ಮಹಿಮೆ :

ಮಹಾಪುರುಷರ ನಡೆ, ನುಡಿ, ನೋಟ ಹಾಗೂ ಸ್ಪರ್ಶ ಇವೆಲ್ಲ ಸಾಮಾನ್ಯ ಜನರಿಗೆ ವಿಲಕ್ಷಣವಾದಂಥವು ಎನಿಸುತ್ತವೆ. ಅವರು ಇವುಗಳಲ್ಲಿ ಒಂದು ಬಗೆಯ ವಿಶೇಷತೆಯನ್ನು ಕಂಡು ಲೋಕೋತ್ತರವಾದಂಥವು ಎಂದು ಭಾವಿಸುತ್ತಾರೆ. ಈ ಭಾವನೆಯನ್ನು ಇನ್ನಷ್ಟು ಗಟ್ಟಿಗೊಳಿಸಲು ಪುರಾಣಕಾರರು ಪವಾಡಗಳನ್ನು ಧಾರ್ಮಿಕ ಮಹಾಪುರುಷರ ಚರಿತ್ರೆಯಲ್ಲಿ ಹೆಣೆಯುತ್ತಾರೆ. ಸಿದ್ಧರಾಮನ ನುಡಿ, ನೋಟ, ಸ್ಪರ್ಶ, ಪಾವನವಾದವು ಪವಿತ್ರವಾದವು ಎಂಬುದನ್ನು ಹಲವಾರು ಪವಾಡಗಳು ಸಾಂಕೇತಿಕಾರ್ಥದಲ್ಲಿ ಬಿಂಬಿಸುವುದನ್ನು ಇಲ್ಲಿ ಕಾಣಬಹುದು ; ಸಿದ್ಧರಾಮನ ಆಶ್ರಯವನ್ನು ಬಯಸಿ ಬಂದ ಜಿನಕನನ್ನು ಸೆಳ್ಳಿಗೆಯ ಜನರು ತಮ್ಮೂರಿಗೆ ಜಿನಕನನ್ನು ಒಯ್ಯಲು ಬಂದು ವಿಫಲರಾಗಿ ಹಾಗೆಯೇ ತಿರುಗಿ ಹೋಗುವರು. ತಮಗಾದ ಈ ಅವಮಾನದ ಸೇಡನ್ನು ಸಿದ್ಧರಾಮನ ಮೇಲೆ ತೀರಿಸಿಕೊಳ್ಳಬೇಕೆಂದು ತಮ್ಮ ಊರಿನ ಕಬ್ಬಿಲರಿಗೆ ಸಿದ್ಧರಾಮನಿಂದ ಲಿಂಗ ಪ್ರಸಾದವನ್ನು ಬೇಡಿ ಪಡೆಯಿರಿ ಎಂದು ಅವರನ್ನು ಕಳಿಸುವರು. ಕಬ್ಬಿಲರು ಬಂದು ಸಿದ್ಧರಾಮನಿಗೆ ಪ್ರಸಾದ ಕೊಡಿ ಎಂದು ಬೇಡುವರು. ಭಕ್ತಿಯಿಂದ ಪ್ರಸಾದ ಕೇಳಿದ ಅವರಿಗೆ ಸಿದ್ಧರಾಮ ವಿಷವನ್ನು ಪ್ರಸಾದವೆಂದು ಕೊಡಲು ಹೋಗುವನು.

---

11. 'ಬಸವ ಪುರಾಣ', ಸಂಧಿ; 9, ಪದ್ಯ 1–52,
'ಹಾಥರಾಯನ ಕಾವ್ಯ', ಸಂಧಿ ; 21, ಪದ್ಯ: 57
'ರಾಘವಾಂಕ ಚರಿತೆ : ಸಂಧಿ ; 15, ಪದ್ಯ ; 21-22,
'ಭೈ. ಕಾವ್ಯ, ಭಾಗ-2, ಪುಟ ; 378.

ಆಗ ಅವರು ಹೆದರಿ ಓಡಿ ಹೋಗುವರು. ಸಿದ್ಧರಾಮ ಅದನ್ನೇ ಸ್ಪರ್ಶಿಸಿ ತನ್ನ ಶಿಷ್ಯರಿಗೆ ಹಂಚುವನು.[12]

ಸ್ಪರ್ಶ ಮಾತ್ರದಿಂದ ವಿಷವು ಪ್ರಸಾದವಾಯಿತೆಂದು ಈ ಪವಾಡ ಸಾರುವುದರೊಂದಿಗೆ ಪ್ರಸಾದ ತತ್ವದ ಘನತೆಯನ್ನೂ ಎತ್ತಿ ಹೇಳಿದೆ. ಭಕ್ತಿಯಿದ್ದರೆ ಭಾವನೆ ಪರಿಶುದ್ಧವಾಗಿದ್ದರೆ ವಿಷವಿದ್ದರೂ ಅದು ಪ್ರಸಾದವಾಗಬಲ್ಲುದು ಎಂಬುದನ್ನು ಇಲ್ಲಿ ಈ ಪವಾಡ ಸಾರಿದೆ.

ಒಮ್ಮೆ ಸಿದ್ಧರಾಮನು ಶಿವನ ಅಣತಿಯಂತೆ ಸೊನ್ನಲಿಗೆಯಂತೆ ಶಿವಲಿಂಗವನ್ನು ಸ್ಥಾಪಿಸಲೆಂದು ಅದನ್ನು ರಥದಲ್ಲಿರಿಸಿಕೊಂಡು, ಹೋರಿ ಎತ್ತುಗಳಿಂದ ಅದನ್ನು ಎಳೆಸುತ್ತ ತರುತ್ತಿದ್ದನು. ತರುವಾಗ ಆತ ನಡೆದರೆ ರಥ ನಡೆಯುತ್ತಿತ್ತು, ಆತ ನಿಂತರೆ ರಥ ನಿಲ್ಲುತ್ತಿತ್ತು.[13] ಶಿವಲಿಂಗವನ್ನೊಳಗೊಂಡ ರಥ ಸಿದ್ಧರಾಮನನ್ನೇ ಹೋಲುವಂಥದು. ಆತನ ಶರೀರ ಶಿವನ ಆವಾಸಸ್ಥಾನ.ಲಿಂಗಕ್ಕೆ ಚೈತನ್ಯ ಉಂಟಾಗುವುದು ಜಂಗಮನಿಂದಲೇ ಎಂಬ ತತ್ವವನ್ನಿಲ್ಲಿ ಈ ಪವಾಡ ಎತ್ತಿ ತೋರಿಸಿದೆ. ಗುರು-ಲಿಂಗ-ಜಂಗಮ ತತ್ವಗಳು ಶಿವಾನುಭಾವಿಯಲ್ಲಿ ಸಾಕಾರಗೊಂಡಿರುವಂಥವು. ಸಿದ್ಧರಾಮ ಅಂಥ ಶಿವಾನುಭವಿ ಎಂಬುದನ್ನು ಈ ಪವಾಡ ಅರ್ಥಪೂರ್ಣವಾಗಿ, ಸಾಂಕೇತಿಕವಾಗಿ ಹಿಡಿದಿರುವುದರ ಜೊತೆಗೆ ಆತನ ವ್ಯಕ್ತಿತ್ವ ಮಹಿಮೆಯನ್ನೂ ಸಾರಿದೆ.

ಸೃಷ್ಟಿಯಲ್ಲಿ ಸಹಜವಾಗಿ ಜರುಗುವ ಪ್ರತಿಯೊಂದು ಪ್ರಕ್ರಿಯೆಗಳೂ ಧಾರ್ಮಿಕ ಮಹಾಪುರುಷರ ಅಣತಿಯಂತೆಯೇ ನಡೆಯುವಂಥವು ಎಂಬುದು ಜನತೆಯ ನಂಬುಗೆ. ಹೊಳೆ ದಾರಿ ಬಿಡುವುದು, ಸಿಡಿಲು ಪ್ರದಕ್ಷಿಣೆ ಹಾಕುವುದು, ಹುಲಿ ನಮಸ್ಕರಿಸುವುದು ಇಂಥವೂ ಮಹಾಪುರುಷರ ಅಂಕಿತದಲ್ಲಿಯೇ ಇರುವಥಂವು. ಒಟ್ಟನಲ್ಲಿ ಮಹಾಪುರುಷರು ಮಹಿಮಾಶಾಲಿಗಳು, ಅದ್ಭುತ ಶಕ್ತಿಶಾಲಿಗಳು-ಎಂಬುದನ್ನು ತೋರಿಸಲು ಇಂಥವನ್ನು ಪುರಾಣಕವಿಗಳು ವರ್ಣಿಸಿರುತ್ತಾರೆ. ಸಿದ್ಧರಾಮ ಒಂದು ದಿನ ಕ್ಷೇತ್ರ ಪ್ರದಕ್ಷಿಣೆ ಹಾಕುತ್ತಿದ್ದಾಗ ಸಿಡಿಲೊಂದು ಭರದಿಂದ ಬಂತು. ಎಲ್ಲರನ್ನು ಹಿಂಸಿಸಿ ಕೊಲ್ಲುವ ಈ ಸಿಡಿಲಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕೆಂದು ಸಿದ್ಧರಾಮನು ಅದಕ್ಕೆ ಖಡ್ಗದಿಂದ ತಿವಿಯುವನು. ಖಡ್ಗ ಅದರಲ್ಲಿ ಸಿಲುಕಿಕೊಳ್ಳುವುದು. ಆಗ ಅದು

---

12. 'ಸಿದ್ಧರಾಮ', ಸಂಧಿ ; 5, ಪದ್ಯ; 12-16,
'ರಾಘವಾಂಕ ಚರಿತೆ, ಸಂಧಿ : 15' ಪದ್ಯ-42

13. 'ಸಿದ್ಧರಾಮ ಚಾರಿತ್ರ' ಸಂಧಿ : 6, ಪದ್ಯ, 23–26

ಗರಗರನೆ ತಿರುಗತೊಡಗುವುದು ಎಂದು ಬಣ್ಣಿಸಿದೆ.[14]

ಇಲ್ಲಿ ಸಿಡಿಲಿನಂತಹ ಸೃಷ್ಟಿಯ ಕ್ರೂರ ಪ್ರಕ್ರಿಯೆಗಳನ್ನೂ ಜಯಿಸುವ, ಅದನ್ನು ಹೆದರಿಸಿ ತನ್ನ ಅಂಕಿತದಲ್ಲಿ ಇರಿಸಿಕೊಳ್ಳುವ ಅಗಾಧಶಕ್ತಿ ಸಿದ್ಧರಾಮನಲ್ಲಿ ಇತ್ತೆಂಬುದನ್ನು ತೋರಿಸುವುದು ಈ ಪವಾಡದ ಹಿನ್ನೆಲೆಗಿರುವ ಧ್ಯೇಯವಾಗಿದೆ. ಮಹಾಪುರುಷರು ಎಲ್ಲವನ್ನೂ ಜಯಿಸಿದವರು ಎಂಬುದನ್ನು ಈ ಪವಾಡ ಸಾರಿದೆ.

ಸಿದ್ಧರಾಮನು ನುಡಿದ ನುಡಿ ಹುಸಿಯಾಗದು, ಆತನ ಮಾತಿನಲ್ಲಿ ಅವ್ಯಕ್ತವಾದ ಶಕ್ತಿ ಇರುವುದನ್ನೂ, ಆತನ ವ್ಯಕ್ತಿತ್ವ ಮಹಿಮೆಯನ್ನೂ ಸಾರುವ ಕೆಲವು ಪವಾಡಗಳು ಹೀಗಿವೆ : ಒಂದು ದಿನ ರಾತ್ರಿ ಸೆಳ್ಳಿಗೆಯ ಬೆನಕ ಸಿದ್ಧರಾಮನ ಬಳಿ ಬಂದು ಆತನ ಆಶ್ರಯ ಪಡೆದು ಅಲ್ಲಿಯೇ ಇರತೊಡಗಿದ. ಆ ಊರಿನವರು ಸಿದ್ಧರಾಮನಲ್ಲಿಗೆ ಬಂದು ನಮ್ಮ ಬೆನಕನನ್ನು ಕಳಿಸಿಕೊಡಿ ಎಂದು ಕೇಳುವರು. ಆಗ ಸಿದ್ಧರಾಮ, "ಯಾರು ಬೇಡವೆನ್ನುತ್ತಾರೆ, ಆತ ಬಂದರೆ ಕರೆದೊಯ್ಯಿರಿ" ಎಂದ. ಅವರೆಲ್ಲ ಬೆನಕನನ್ನು ಎಷ್ಟು ಎಳೆದರೂ ಒಂದಿಂಚೂ ಆತ ಅಲುಗಲಿಲ್ಲ.[15] ಇಲ್ಲಿ ಶರಣಾಗತರಾದವರನ್ನು ರಕ್ಷಿಸುವ ಕರ್ತವ್ಯ ಸಿದ್ಧರಾಮನದಾದುದನ್ನು ತಿಳಿಯುವುದರೊಂದಿಗೆ 'ಆತ ಬಂದರೆ ಕರೆದೊಯ್ಯಿರಿ' ಎಂಬ ಆತನ ನುಡಿ ಎಷ್ಟೊಂದು ಅರ್ಥಪೂರ್ಣವಾದುದು, ಮಹಿಮಾನ್ವಿತವಾದುದು ಎಂಬುದನ್ನು ಅರಿಯುವೆವು. ಶರಣಾಗತರಾದವರನ್ನು ರಕ್ಷಿಸುವ ಕಳಕಳಿ, ಕರ್ತವ್ಯ ಪ್ರಜ್ಞೆ ಸಿದ್ಧರಾಮನಲ್ಲಿ ಗಟ್ಟಿಗೊಂಡು, ಆತನ ಮಾತಿನಲ್ಲಿ ಅದು ಸಾಕಾರಗೊಂಡು ಸಾರ್ಥಕತೆ ಪಡೆದುದನ್ನಿಲ್ಲಿ ಕಾಣುವೆವು. ಇದೇ ಸಾಮಾನ್ಯರ ದೃಷ್ಟಿಯಲ್ಲಿ ಪವಾಡ ರೂಪ ತಾಳಿದೆ.

ಸಿದ್ಧರಾಮ ತನ್ನ ಶಿಷ್ಯರೊಂದಿಗೆ ಶಿವಲಿಂಗವನ್ನು ರಥದಲ್ಲಿರಿಸಿ ತರುತ್ತಿರುವಾಗ ಒಂದೆಡೆ ಕತ್ತಲಾಗುವುದು. ಆಗ ಸಿದ್ಧರಾಮ "ಬೆಳಗಾಗುವ ವರೆಗೆ ರಥ ನಡೆಸುವುದು ಬೇಡ. ನಾನು ಬಂದೊಡನೆ ಹೋಗೋಣ"ವೆಂದು ಹೇಳಿ ಹೋಗುವನು. ಇತ್ತ ಬೆಳಗಾದೊಡನೆ ಸಿದ್ಧರಾಮ ಬರುವುದು ತಡವಾಯಿತೆಂದು ಆತನ ಶಿಷ್ಯರು ಎತ್ತುಗಳನ್ನು ತಂದು ರಥಕ್ಕೆ ಹೂಡಿ ಹೊಡೆಯುವರು. ಆ ಕ್ಷಣವೇ ಅವು ಸತ್ತು ಬೀಳು

---

14. 'ಸಿದ್ಧರಾಮ ಚಾರಿತ್ರ', ಸಂಧಿ ; 7, ಪದ್ಯ : 38-39'
'ರಾಘವಾಂಕ ಚರಿತೆ; ಸಂಧಿ ; 15, ಪದ್ಯ 54–55

15. 'ಸಿದ್ಧರಾಮ ಚಾರಿತ್ರ', ಸಂಧಿ ; 5 ಪದ್ಯ ; 9-10,
'ರಾಘವಾಂಕ ಚರಿತೆ ; ಸಂಧಿ ; 15, ಪದ್ಯ ; 41–42

ವವು. ಆಗ ಸಿದ್ಧರಾಮ ಒಂದು ಜೀವ ಬರಿಸುವ ಗೀತ ಹಾಡಿ ಅವನ್ನು ಬದುಕಿಸು ವನು.[16] ಇಲ್ಲಿ ಆತನ ವಾಕ್‌ಸಿದ್ಧಿಯ ಮಹಿಮೆ ವ್ಯಕ್ತಗೊಂಡುದು ಸ್ಪಷ್ಟ.

**೪. ಸೊನ್ನಲಿಗೆಯ ತೀರ್ಥದ ಹಾಗೂ ಕ್ಷೇತ್ರದ ಮಹಾತ್ಮೆ :**

ಸಿದ್ಧರಾಮ ಕೆರೆ ಬಾವಿ ತೋಡಿಸುವುದರ ಮೂಲಕ ಒಂದೆಡೆ ಸೊನ್ನಲಾಪುರ ವನ್ನು ಜನ ವಾಸಿಸಲು ಪ್ರಶಸ್ತ ಸ್ಥಳವಾಗಿಸಿದರೆ, ಇನ್ನೊಂದೆಡೆ ಅಲ್ಲಿನ ಜನತೆಯಲ್ಲಿ ಶ್ರೀಶೈಲದ ಮಲ್ಲಿಕಾರ್ಜುನನ ಬಗ್ಗೆ ಭಕ್ತಿ ಭಾವ ಮೂಡಿಸುವುದರ ಮೂಲಕ ಅದನ್ನು ಆಧ್ಯಾತ್ಮ ಕೇಂದ್ರವಾಗಿಸಿದನು. ಆತನಿಂದ ಸೊನ್ನಲಿಗೆಯು ಪ್ರಸಿದ್ಧವೂ ಪಾವನವೂ ಆದ ಪುಣ್ಯಕ್ಷೇತ್ರವಾಗಿ ಪರಿಣಮಿಸಿದುದನ್ನು ಕೆಲ ಪವಾಡಗಳು ವರ್ಣಿಸಿವೆ : ಸಿದ್ಧ ರಾಮನು ಕಟ್ಟಿಸಿದ ಕೆರೆ ಶೂದ್ರನು ಕಟ್ಟಿಸಿದ ಕೆರೆಯೆಂದು ವೊರಬದ ಬ್ರಾಹ್ಮಣರು ಅದರಲ್ಲಿ ಸ್ನಾನ ಮಾಡಲು ಹಿಂದೆ-ಮುಂದೆ ನೋಡುವರು. ಅದಕ್ಕೆ ಜಲ ಶುದ್ಧಿ ಯಿಲ್ಲ ಎನ್ನುತ್ತ ಅವರು ಕೆರೆಯನ್ನು ಅಭಿಮಂತ್ರಿಸಿ ಅದರಲ್ಲಿಳಿದು ಸ್ನಾನ ಮಾಡು ವರು. ಮಾಡಿ ಮೇಲೆ ಬರುವಷ್ಟರಲ್ಲಿ ಕಾಗೆಗಳು ಅವರನ್ನು ಮುಟ್ಟುವವು. ಮತ್ತೆ ಅವರು ಸ್ನಾನ ಮಾಡುವರು. ಕಾಗೆಗಳು ಮತ್ತೆ ಮತ್ತೆ ಅವರನ್ನು ಮುಟ್ಟುವವು. ಆಗ ಅವರು ಸಿದ್ಧರಾಮನಿಗೆ ತಾವು ಅಂದುದು ತಪ್ಪಾಯಿತೆಂದು ಆತನಿಗೆ ಶರಣಾಗತ ರಾಗುವರು. ಕ್ಷಮಿಸಿರೆನ್ನುತ್ತ ತಾವು ಮಾಡುತ್ತಲಿರುವ ಮಡಿ ಮೈಲಿಗೆಯನ್ನು ಬಿಟ್ಟು ಬಿಡುವರು. ಮತ್ತು ತಾವು ಶ್ರೇಷ್ಠ ಕುಲದವರೆಂಬ ಕುಲಮದವನ್ನೂ ತ್ಯಜಿಸುವರು.[17]

ಬ್ರಾಹ್ಮಣರ ಅತಿಯಾದ ಕರ್ಮಠತನ ಹಾಗೂ ಕುಲಮದವನ್ನು ನಿವಾರಣೆ ಮಾಡುವುದೇ ಪ್ರಸ್ತುತ ಪವಾಡದ ಧ್ಯೇಯವಾದುದು ಸ್ಪಷ್ಟ. ಜೊತೆಗೆ ಸಿದ್ಧರಾಮ ಕಟ್ಟಿಸಿದ ಕೆರೆಯ ನೀರು ಪವಿತ್ರವಾದುದೆಂಬುದನ್ನೂ ಈ ಪವಾಡ ಸಾರಿದೆ. ಇದು ತೀರ್ಥದ ಮಹಾತ್ಮೆಯನ್ನು ಸಾರಿದಂತೆ, ಕ್ಷೇತ್ರದ ಮಹಾತ್ಮೆಯನ್ನು ಸಾರುವ ಪವಾಡ ವೊಂದನ್ನಿಲ್ಲಿ ನೋಡಬಹುದು : ಕೇತಾರ ಗುರುಗಳೂ, ಹಾವಿನ ಹಾಳ ಕಲ್ಲಯ್ಯನೂ ಸಿದ್ಧರಾಮನ ಶ್ರೇಷ್ಠತೆಯನ್ನು ಹೊಗಳುತ್ತಿರುವಾಗ ಒಬ್ಬನು ನಡುವೆ ಬಾಯಿ ಹಾಕಿ ಆಕ್ಷೇಪಿಸುವನು. ಇದನ್ನು ಅವರೀರ್ವರೂ ಸಿದ್ಧರಾಮನಿಗೆ ತಿಳಿಸಿ "ಸೊನ್ನಲಿಗೆಯ ಮಹಿಮೆ ಎಲ್ಲರಿಗೂ ತಿಳಿಯುವಂತೆ ನೀನು ಏನಾದರೂ ಪವಾಡ ಮಾಡು" ಎಂದು ಹೇಳುವರು. ಆಗಲಿ ಎಂದು ಸಿದ್ಧರಾಮ ಕಾಸಿದ ಪಂಚಲೋಹದ ಗುಂಡನ್ನು ಕೈಯಲ್ಲಿ ಹಿಡಿದುಕೊಂಡು "ಇನ್ನಾದರೂ ಮಲ್ಲಿಕಾರ್ಜುನನನ್ನು ನಂಬಿರಿ, ಸೊನ್ನಲಿಗೆ

---

16. 'ಸಿದ್ಧರಾಮ ಚಾರಿತ್ರ' ಸಂಧಿ ; 6, ಪದ್ಯ 26-29

17. 'ಸಿದ್ಧರಾಮ ಚಾರಿತ್ರ; ಸಂಧಿ : 4, ಪದ್ಯ : 75-78

ಪವಿತ್ರ ಕ್ಷೇತ್ರವೆಂದು ತಿಳಿಯಿರಿ" ಎನ್ನುತ್ತ, ಕೈಯಲ್ಲಿನ ಗುಂಡನ್ನು ಕೆಳಗೆ ಚೆಲ್ಲುವನು. ಚೆಲ್ಲಿದೊಡನೆ ಅದು ಹೊತ್ತಿಕೊಂಡು ಉರಿಯತೊಡಗುವುದು. ಇದನ್ನು ಕಂಡು ಜನರ ಸೊನ್ನಲಾಪುರವು ಪವಿತ್ರಕ್ಷೇತ್ರವೆಂದು ನಂಬುವರು.[18]

ಸಾಮಾನ್ಯ ಜನರಿಗೆ ಕ್ಷೇತ್ರ ಮಹಿಮೆಯನ್ನು ತಿಳಿಸಲು ಪುರಾಣಕಾರರು ಈ ಪವಾಡವನ್ನು ವರ್ಣಿಸಿರುವುದು ಸ್ಪಷ್ಟ. ಇದೊಂದು ವಿಧದ ಅಗ್ನಿದಿವ್ಯ. ಅಂದು ಸಂಶಯ ಪಡುವವರನ್ನು ನಂಬಿಸಲು ಇಂಥ ದಿವ್ಯಗಳನ್ನು ನಡೆಸುತ್ತಿದ್ದುದುಂಟು. ಆದರೆ ಈ ರೀತಿ ಜನತೆಯನ್ನು ನಂಬಿಸಲು ಶರಣರು ಇಂಥ ದಿವ್ಯಗಳನ್ನಾಗಲೀ, ಪವಾಡಗಳನ್ನಾಗಲೀ ಮಾಡಿದವರಲ್ಲವೆಂಬುದು ಸೂರ್ಯಪ್ರಕಾಶದಷ್ಟು ಸತ್ಯ. ಆದರೆ ಅವರು ಗತಿಸಿದ ಅನಂತರ ಪುರಾಣಕಾರರು ಅವರ ಚರಿತ್ರೆಯಲ್ಲಿ ಇಂಥ ಪವಾಡಗಳನ್ನು ಹೆಣೆದಿದ್ದಾರೆ. ಇಂಥವುಗಳಿಂದ ಪುರಾಣಕಾರರು ಶರಣರನ್ನು ದೊಡ್ಡವರನ್ನಾಗಿ ಮಾಡ ಹೊರಟಿದ್ದಾರೆ. ನಿಜವಾಗಿ ನೋಡಿದರೆ, ಶರಣರು ಇಂಥ ಪವಾಡಗಳಿಂದೇನೂ ದೊಡ್ಡವರಾಗಿಲ್ಲ. ಅವರು ತಮ್ಮ ನೈಜವಾದ ನಡೆನುಡಿಗಳಿಂದ ದೊಡ್ಡವರಾಗಿದ್ದಾರೆ.

೫. ಸಿದ್ಧರಾಮನ ಯೋಗಸಿದ್ಧಿಯ ಮಹತ್ವ :

ಯೋಗಿಗಳು ಯೌಗಿಕ ಶಕ್ತಿಯಿಂದ ಪವಾಡಗಳಂತಹ ಸಿದ್ಧಿಗಳನ್ನು ಪಡೆದುಕೊಳ್ಳಬಹುದೆಂದು ಭಾರತೀಯ ಯೋಗಶಾಸ್ತ್ರ ತಿಳಿಸುತ್ತದೆ. ಆದರೆ ಪವಾಡಗಳನ್ನು ಪ್ರದರ್ಶಿಸುವುದು ಯೋಗಸಿದ್ಧಿಯ ಪರಮಧ್ಯೇಯವಲ್ಲವೆಂದೂ, ಅದನ್ನು ಪ್ರದರ್ಶಿಸಬಾರದೆಂದೂ, ಅಂಥವನ್ನು ಯೋಗಿ ದಾಟಿ ಮುನ್ನಡೆಯಬೇಕೆಂದೂ ಅದೇ ಯೋಗಶಾಸ್ತ್ರ ಹೇಳುತ್ತದೆ. ಆದರೆ ಪುರಾಣಕಾರರು ಇದನ್ನು ಲಕ್ಷಿಸದೆ ಹೋಗಿದ್ದಾರೆ. ಸಿದ್ಧರಾಮನು ಯೋಗಶಕ್ತಿಯಿಂದ ದೇಹವನ್ನು ವಜ್ರದಂತೆ ಗಟ್ಟಿಮಾಡಿಕೊಂಡವ, ಹಲವಾರು ಪವಾಡಗಳನ್ನು ತನ್ನ ಯೌಗಿಕ ಶಕ್ತಿಯಿಂದ ಪ್ರದರ್ಶಿಸಿದವ ಎಂದು ಪುರಾಣಕಾರರು ಬಣ್ಣಿಸಿದ್ದುಂಟು. ಅಂಥವುಗಳಲ್ಲಿ ಒಂದು ಪವಾಡ ಹೀಗಿದೆ : ಸಿದ್ಧರಾಮನು ಒಂದು ದಿನ ಕ್ಷೇತ್ರ ಪ್ರದರ್ಶನ ಮಾಡುತ್ತಿದ್ದಾಗ ರಕ್ಕಸಿಯೊಬ್ಬಳು ಆತನನ್ನು ಕಂಡು ಆತನ ರಕ್ತವನ್ನು ಕುಡಿಯ ಬಯಸುವಳು. ಆಗ ಸಿದ್ಧರಾಮ "ನನ್ನ ದೇಹದ ಯಾವ ಭಾಗದ ರಕ್ತ ಬೇಕೋ ಅದನ್ನು ತೆಗೆದುಕೊಂಡು ಕುಡಿ" ಎನ್ನುವನು. ಆಕೆ ಆತನನ್ನು ಖಡ್ಗದಿಂದ ಹೊಡೆಯುವಳು. ಆತನ ದೇಹಕ್ಕೆ ಗಾಯವೂ ಆಗಲಿಲ್ಲ, ರಕ್ತವೂ ಬರಲಿಲ್ಲ. ಆಗ ಆಕೆ "ನನ್ನನ್ನು ನಿನ್ನ ಹೊಟ್ಟೆಯಲ್ಲಿ

---

18. 'ಸಿದ್ಧರಾಮ ಚಾರಿತ್ರ' ಸಂಧಿ ; 7, ಪದ್ಯ ; 9-22,
'ರಾಘವಾಂಕ ಚರಿತೆ ; ಸಂಧಿ 15, ಪದ್ಯ 39-40.

ಹೊಗಿಸಿಕೊ" ಎನ್ನಲು, ಹಾಗೆಯೇ ಆಗಲಿ ಎಂದು ಆಕೆಯನ್ನು ತನ್ನ ಹೊಟ್ಟೆಯಲ್ಲಿ ಹೊಗಿಸಿಕೊಳ್ಳುವನು. ಅಲ್ಲಿಯೂ ಆಕೆಗೆ ರಕ್ತ ಸಿಗದಾಗಲು ಚಡಪಡಿಸಿ ಅಧೋ ದ್ವಾರದಿಂದ ಹೊರಬರುವಳು.[19] ರಾಕ್ಷಸಿಗೂ ಹೆದರದ ವಜ್ರದಂತಹ ದೇಹ ಸಿದ್ಧ ರಾಮನದು ಎಂಬುದನ್ನೂ, ಯೋಗಸಿದ್ಧಿಯ ಮಹತ್ವವನ್ನೂ ಈ ಪವಾಡ ಸಾರಿದೆ. ಈತನ ಯೋಗ ಸಿದ್ಧಿಯನ್ನು ಕೆಡಿಸಲು ಬಂದ ಖರ್ಪರನೆಂಬ ಯೋಗಿ ಸೋತು ಹೋದುದನ್ನು ಈ ಮುಂದಿನ ಪವಾಡದಲ್ಲಿ ಕಾಣುವೆವು. ಸಿದ್ಧರಾಮನ ಯೋಗ ಸಾಮರ್ಥ್ಯ ಹಾಗೂ ಆತನ ಕೀರ್ತಿಯನ್ನು ಕೇಳಿ ಸಹಿಸದೆ ಹೊಟ್ಟೆಕಿಚ್ಚುಪಟ್ಟು ಕೊಂಡ ಕುಟಿಲವಿದ್ಯಾಸಮುದ್ರನೆಂಬ ಬಿರುದಿನ ಖರ್ಪರನೆಂಬ ಯೋಗಿ ಸಿದ್ಧರಾಮನ ಬಳಿ ಬಂದು, ಆತ ಮಾಡುತ್ತಿದ್ದ ಹೋಮವನ್ನು ಕೆಡಿಸಲುಯತ್ನಿಸುವನು. ಇದನ್ನು ತಿಳಿದ ಸಿದ್ಧರಾಮನು ತನ್ನ ಹಣೆಗಣ್ಣಿನ ಉರಿಯಿಂದ ಆತನನ್ನು ಹಾಗೂ ಆತನ ಪರಿ ವಾರವನ್ನು ಸುಡತೊಡಗುವನು. ಬೆಂಕಿಯಲ್ಲಿ ಆತ ಚಡಪಡಿಸುತ್ತ ದಹಿಸುತ್ತಿರುವು ದನ್ನು ಹಾಗೂ ಸೃಷ್ಟಿಯಲ್ಲಿನ ಪಶು ಪಕ್ಷಿಗಳೆಲ್ಲ ಸುಟ್ಟುಹೋಗುತ್ತಾ ಇರುವುದನ್ನು ಸಿದ್ಧರಾಮ ಕರುಣೆಯಿಂದ ನೋಡುವನು, ಆಗ ಉರಿ ನಿಲ್ಲುವುದು. ಖರ್ಪರ ಆಗ ಓಡಿ ಬಂದು ಶರಣಾಗತನಾಗುವನು, ಕ್ಷಮೆ ಯಾಚಿಸುವನು. ಸಿದ್ಧರಾಮನು ಆತನ ಮೇಲೆ ದಯೆ ತೋರಿ ಕಾಪಾಡುವನು.[20] ಸಿದ್ಧರಾಮನ ಯೋಗಶಕ್ತಿಯ ಮಹತಿಯನ್ನು ಸಾರುವುದರೊಂದಿಗೆ ಈ ಪವಾಡ ಯೋಗಶಕ್ತಿಯನ್ನು ಜನತೆಯ ವಿನಾಶಕ್ಕಾಗಿ ಬಳಸ ಬಾರದೆಂಬುದನ್ನೂ ಎತ್ತಿ ಹೇಳಿದೆ.

೬. ಸಿದ್ಧರಾಮನ ಮಾನವೀಯತೆ–ಜೀವದಯೆ :

ಸಿದ್ಧರಾಮ ಸಂಕಷ್ಟಗಳಲ್ಲಿ ಸಿಲುಕಿದವರನ್ನು ಪಾರು ಮಾಡುವ ದಯಾಮಯಿ, ಮಾನವೀಯ ಅನುಕಂಪೆಯನ್ನು ಹೊಂದಿದ ಮಹಾನುಭಾವ. ಆತನ ಜೀವದಯೆ ಹಾಗೂ ಮಾನವೀಯ ಅನುಕಂಪಗಳನ್ನು ಕೆಲವು ಪವಾಡಗಳು ಪ್ರದರ್ಶಿಸಿದುದನ್ನಿಲ್ಲಿ ನೋಡಬಹುದು. ಬಿಲ್ಲೇಶ ಬೊಮ್ಮಯ್ಯನೆಂಬೊಬ್ಬ ವ್ಯಕ್ತಿ ಜೀವನಮುದ್ದಕ್ಕೂ ಅನೇಕ ಕೆಟ್ಟ ಕೆಲಸಗಳನ್ನು ಮಾಡಿದಾತ. ಸಾಲ ಪಡೆದು ತಿರುಗಿ ಕೊಡಲಾರದೆ ಸಿದ್ಧ ರಾಮನ ಬಳಿ ಬಂದು ಆತನ ಆಶ್ರಯ ಪಡೆದು ನೆಲಸಿದಾತ. ಹೀಗಿರಲು ಸಾಲ ಕೊಟ್ಟವರು ಆತನನ್ನು ಹುಡುಕಿಕೊಂಡು ಬಂದು ಪೀಡಿಸುವರು. ಇದರಿಂದ ಆತನಿಗೆ ಕೆಡುಕೆನಿಸಲು ಆತ್ಮಹತ್ಯೆ ಮಾಡಿಕೊಂಡು ನರಕ ಸೇರುವನು. ಈ ಸಂಗತಿ ದಿನ ನಿತ್ಯ ಕೈಲಾಸಕ್ಕೆ ಹೋಗಿ ಬರುತ್ತಿದ್ದ ಸಿದ್ಧರಾಮನಿಗೆ ತಿಳಿಯಲು, ಆತ ಬೊಮ್ಮಯ್ಯನ ಮೇಲೆ ಕರುಣೆದೋರಿ ಆತನನ್ನು ನರಕದಿಂದ ಪಾರುಮಾಡುವನು.[21]

---

19. 'ಸಿದ್ಧರಾಮ ಚಾರಿತ್ರ, ಸಂಧಿ : 6, ಪದ್ಯ ; 1–8
20. 'ಸಿದ್ಧರಾಮ ಚಾರಿತ್ರ' ಸಂಧಿ : 7, ಪದ್ಯ 26-33
21. 'ಸಿದ್ಧರಾಮ ಚಾರಿತ್ರ' ಸಂಧಿ ; 8, ಪದ್ಯ 1-45

ನರಕ ಸದೃಶವಾದ ಬದುಕನ್ನು ಬದುಕುತ್ತಿರುವವರನ್ನು ಸಿದ್ಧರಾಮ ಪಾರು ಮಾಡಿವನೆಂಬ ಅರ್ಥ ಈ ಪವಾಡದ ಹಿನ್ನೆಲೆಯಲ್ಲಿದೆ. ಸ್ವರ್ಗ, ನರಕ ಹಾಗೂ ಪಾತಾಳ ಇವೆಲ್ಲ ಶರಣರ ದೃಷ್ಟಿಯಲ್ಲಿ ಮಾನವ ಕಲ್ಪಿತವಾದಂಥವೇ ಆಗಿವೆ. ಸತ್ಯ ನುಡಿವುದೇ ಸ್ವರ್ಗ, ಮಿಥ್ಯ ನುಡಿವುದೇ ನರಕ. ಅಜ್ಞಾನಿಗಳ ಮಿಥ್ಯದ ಬದುಕನ್ನು ಕೊನೆಗಾಣಿಸಿ, ಅವರನ್ನು ಸದ್ಗುಣಿಗಳನ್ನಾಗಿಸಿದ ಸತ್ಯದ ಬದುಕಿಗೆ ಅವರು ಪಾದಾರ್ಪಣ ಮಾಡಲು ಮಾರ್ಗದರ್ಶನ ಮಾಡಿದ ಎಂಬುದೂ ಈ ಪವಾಡದ ಹಿನ್ನೆಲೆಗಿರುವ ಸಾಂಕೇತಿಕಾರ್ಥವಾಗಿದೆ.

ಇದರಂತೆಯೇ ಸಿದ್ಧರಾಮ ಸತ್ತ ಜೆಕ್ಕಿಗೆ, ಸತ್ತ ಕಾಳವ್ವೆಗೆ, ಸತ್ತ ಮಗನಿಗೆ ಜೀವ ಬರಿಸಿದ ಪವಾಡ ಮಾಡಿದನೆಂದು ವರ್ಣಿಸಿದುದನ್ನಿಲ್ಲಿ ನೋಡಬಹುದು : ಸತ್ತ ತಾಯಿ ಜೆಕ್ಕಿನ ಬಳಿ ಅದರ ಮರಿಯೊಂದು ಒಂದೇ ಸಮನೆ ಕೂಗುತ್ತಿದುದ್ದನ್ನು ಕಂಡು ಸಿದ್ಧರಾಮನು ಕರುಣೆಯಿಂದ ಆ ಜೆಕ್ಕಿಗೆ ಜೀವದಾನ ಮಾಡಿದನು.[22] ಶಿವಭಕ್ತನಾದ ಬೊಮ್ಮಿಶೆಟ್ಟಿಯ ಮಡದಿ ಕಾಳವ್ವೆ. ಆಕೆಗೆ ಎಂಟ್ಹತ್ತು ಮಕ್ಕಳು. ಒಂದು ದಿನ ಆಕೆಗೆ ಹಾವು ಕಚ್ಚಲು, ಆಕೆ ಮಡಿಯುವಳು. ಕರುಣೆಯಿಂದ ಸಿದ್ಧರಾಮ ಆಕೆಯನ್ನು ಬದುಕಿಸುವನು.[23] ಸಿದ್ಧರಾಮನ ಕೃಪೆಗೆ ಪಾತ್ರಳಾದ ಓರ್ವ ಸ್ತ್ರೀಗೆ ಏಲೇಶ್ವರನೆಂಬ ಹೆಸರಿನ ಮಗನಿದ್ದ. ಆತ ಪ್ರಾಯಕ್ಕೆ ಬರಲು, ಆತನ ಮದುವೆ ಮಾಡಲು ತಾಯ್ತಂದೆಗಳು ನಿಶ್ಚಯಿಸಿದರು. ಮದುವೆ ದಿನವೇ ಆತನಿಗೆ ಜ್ವರ ಬರುವುದು. "ದಾಹ ಹೆಚ್ಚಾಗ್ತಾ ಇದೆ, ಮಜ್ಜಿಗೆ ಕುಡಿಸವ್ವ"ಎಂದು ಆತ ತನ್ನ ತಾಯಿಗೆ ಕೇಳಿದ. ಆಕೆ ಒಳಗೆ ಹೋಗಿ ಮಜ್ಜಿಗೆ ತರುವಷ್ಟರಲ್ಲಿ ಆತ ಕೊನೆಯುಸಿರೆಳೆದಿದ್ದ. ಮಗ ಮಜ್ಜಿಗೆಯನ್ನು ಕುಡಿದಾದರೂ ಸಾಯಲಿಲ್ಲವಲ್ಲ ಎಂದು ಆಕೆ ಸಿದ್ಧರಾಮನ ಬಳಿ ಬಂದು ದುಃಖಿಸಿದಳು. ಆಗ ಸಿದ್ಧರಾಮನು ಸತ್ತ ಆಕೆಯ ಮಗನಿಗೆ ಜೀವ ಬರಿಸಿ ಆತನಿಗೆ ಮಜ್ಜಿಗೆ ಕುಡಿಸಿದನು.[24]

ಸತ್ತವರನ್ನು ಬದುಕಿಸುವುದು ವೈಜ್ಞಾನಿಕ ಅಸಾಧ್ಯವೆಂಬುದು ಎಲ್ಲರಿಗೂ ತಿಳಿದ ವಿಷಯ. ಆದರೆ ನಾವಿಲ್ಲಿ ಸಿದ್ಧರಾಮ ಸತ್ತವರನ್ನು ಬದುಕಿಸಿದನು, ಎಂದರೆ ಸತ್ತಂತೆ ಇರುವವರನ್ನು ಎಚ್ಚರಿಸಿದ, ಸನ್ಮಾರ್ಗಕ್ಕೆ ಹಚ್ಚಿದ, ಚೈತನ್ಯಶೀಲರನ್ನಾಗಿಸಿದ ಎಂದೇ ಅರ್ಥ ಮಾಡಬೇಕು. ಮನುಷ್ಯರು, ಪಶು ಪಕ್ಷಿಗಳ ಮೇಲೆ ಸಿದ್ಧರಾಮ ತಾಳಿ

---

22. 'ಸಿದ್ಧರಾಮ' . ಸಂಧಿ : 9, ಪದ್ಯ : 21
23. ,, ,, ಸಂಧಿ : 9, ಪದ್ಯ 22–25
24. 'ಸಿದ್ಧರಾಮ ಚಾರಿತ್ರ' ಪದ್ಯ : 28-35,
'ಶಾಂಭರಾಯನ ಕಾವ್ಯ ; ಸಂಧಿ : 16, ಪದ್ಯ : 9

ರುವ ಜೀವದಯೆ ಹಾಗೂ ಕಳಕಳಿಯನ್ನು ಈ ಪವಾಡಗಳು ಸಾಂಕೇತಿಕ ರೀತಿಯಲ್ಲಿ ತಿಳಿಸಿವೆ. ಇಂಥವನ್ನು ನಾವಿಂದು ಯುಗಧರ್ಮದ ಹಿನ್ನೆಲೆಯಲ್ಲಿ, ವೈಜ್ಞಾನಿಕ ಮನೋಭಾವನೆಯನ್ನು ತಾಳಿ ಅರ್ಥಯಿಸಬೇಕು. ಹೀಗೆ ಮಾಡುವುದರಿಂದ ನಮಗೆ ಅವು ಒಳಗೊಂಡ ತತ್ವ, ಜೀವನಾದರ್ಶಗಳು ತಿಳಿಯುವವು.

ಸಿದ್ಧರಾಮನ ಕುರಿತಿವ್ದ ಪವಾಡಗಳೆಲ್ಲ ಆತನ ವ್ಯಕ್ತಿತ್ವವನ್ನು ವಿರಾಡ್ರೂಪದಲ್ಲಿ ಸಾಮಾನ್ಯ ಜನತೆಗೆ ತಿಳಿಸಲು ಯತ್ನಿಸಿವೆ. ಜೊತೆಗೆ ಆತನ ಸಕಲಭೂತಹಿತೇರತ ತತ್ವ ಎಷ್ಟು ವ್ಯಾಪಕವಾದುದು ಎಂಬುವನ್ನೂ ತೋರಿಸಲು ಯತ್ನಿಸಿವೆ. ಆತನ ಭೂತಾನು ಕಂಪೆಗೆ ಈ ಪವಾಡಗಳು ಹೆಚ್ಚಾಗಿ ನಿದರ್ಶನಗಳಾಗಿವೆ. ಕೆಲವು ದೇವ, ದಾನವ, ತಿರ್ಯಕ್ ಮತ್ತು ನಾರಕಲೋಕಗಳಿಗೂ ಸಂಬಂಧಿಸಿದವುಗಳಾಗಿವೆ. ಎಲ್ಲವೂ ಒಂದಿಲ್ಲೊಂದು ಬಗೆಯಲ್ಲಿ ಆತನ ಅಂತರಂಗದ ವ್ಯಕ್ತಿತ್ವವನ್ನು ಬಹಿರಂಗದಲ್ಲಿ ತೆರೆದು ತೋರಿಸಲು ಯತ್ನಿಸಿವೆ. ಈ ರೀತಿ ಪವಾಡಗಳ ಹಿಂದಿರುವ ಸಾಂಕೇತಿಕತೆಯನ್ನು ಗುರುತಿಸುವುದು ಇಂದು ಎಂದಿಗಿಂತ ಅಗತ್ಯವಾಗಿದೆ. ಹೀಗೆ ಗುರುತಿಸಿದಾಗಲೇ ಶರಣರ ನೈಜವಾದ ಚರಿತ್ರೆ ನಮಗೆ ಲಭ್ಯವಾಗುವುದು.



# ‘ತಿರುಪ್ಪಾವೈ’ ಆಚರಣೆ - ಇನ್ನೊಂದು ದೃಷ್ಟಿ

ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ಯ

‘ತಿರು’ ಎಂದರೆ ತಮಿಳಿನಲ್ಲಿ ಮಂಗಳಕರವಾದುದೂ, ಶ್ರೇಯಸ್ಕರವಾದುದೂ, ಸಂಪದ್ಭರಿತವಾಗಿರುವುದು, ಎಂದು ಅರ್ಥವಿದೆ. ‘ಪಾವೈ’ ಎಂದರೆ, ‘ಬಾಳುವೆ’ ಎಂದೂ ಅರ್ಥವಿದೆ. ಇವೆರಡೂ ಸೇರಿದಾಗ ‘ತಿರುಪ್ಪಾವೈ’ ಎಂದರೆ ‘ಮಂಗಳಕರ ಬಾಳುವೆ’ ಅಥವಾ ‘ಸಂಪದ್ಭರಿತಜೀವನ’ ವೆಂದಾಗುತ್ತಿದೆ.

ದ್ರಾವಿಡ ವೇದಗಳಲ್ಲಿ ಒಂದು ಅಂಗವಾಗಿರುವ ಈ ‘ತಿರುಪ್ಪಾವೈ’ ಪ್ರಬಂಧವು ಮೂವತ್ತು ಪಾಶುರಗಳಿಂದ ಕೂಡಿದ್ದು, ಎರಡು ಮುನ್ನುಡಿ (ತನಿಯನ್) ಪಾಶುರಗಳೂ ಇವೆ. ಈ ಪಾಶುರಮಾಲೆಯನ್ನು ‘ಆಂಡಾಳ್’ ಎಂಬ ಹೆಣ್ಣುಮಗಳೊಬ್ಬಳು ಶ್ರೀ ರಂಗನಾಥ ಭಗವಂತನನ್ನು ಮಾತ್ರವೇ ವರಿಸಬೇಕೆಂಬ ಉತ್ಕಟೇಚ್ಛೆಯಿಂದ ರಚಿಸಿದ ಳೆಂದು ಹೇಳಲಾಗಿದೆ. ಈ ‘ಶ್ರೀ ರಂಗನಾಥ’ ನಾದರೋ ಈ ‘ಆಂಡಾಳ್’ ಧರಿಸಿದ ಹೂವನ್ನು ಮಾತ್ರ ಧರಿಸಲು ಇಷ್ಟಪಟ್ಟನೆಂಬುದೂ ಜನಜನಿತವಾಗಿದೆ. ಹೀಗಾಗಿ, ಈ ‘ಆಂಡಾಳ್’ಗೆ ‘ಶೂಡಿ ಕೊಡುತ್ತನಾಚ್ಚಿಯಾರ್’ (ಮುಡಿದು ನೀಡಿದವಳು) ಎಂಬ ಹೆಸರೂ ಇದೆ.

ರಂಗನಾಥ ದೇವರ ಪುಷ್ಪಕೈಂಕರ್ಯ ಮಾಡುತ್ತಿದ್ದ ಓರ್ವ ತೋಟದ ಮಾಲಿಯು ದೈವಭಕ್ತನಾಗಿದ್ದು, ಪ್ರತಿದಿನವೂ ದೇವರಿಗೆ ಪೂಜೆಯ ಕಾಲಕ್ಕೆ ಪೂರ್ವದಲ್ಲಿಯೇ ತೋಟದಲ್ಲಿನ ಹೂಗಳನ್ನು ಬಿಡಿಸಿ, ಮಾಲೆ ಮಾಡಿ, ಗುಡಿಗೆ ತೆಗೆದುಕೊಂಡು ಹೋಗಿ, ಅರ್ಚಕರಿಗೆ ತಲುಪಿಸುವುದಷ್ಟೇ ಈ ಮಾಲಿಯ ಕೆಲಸ. ಈ ಮಾಲಿಯು ತನ್ನ ಮನ ದಲ್ಲಿ ಕೇವಲ ಮಹಾವಿಷ್ಣುವನ್ನೇ ಹೊಂದಿದ್ದುದರಿಂದ ಈ ಮಾಲಿಗೆ ‘ವಿಷ್ಣುಚಿತ್ತ’ ನೆಂಬ ಹೆಸರೂ ಇದೆ. ಆಂಡಾಳ್ ಮಹಿಮೆ, ಹಾಗೂ ತನ್ನ ಅನನ್ಯಭಕ್ತಿಯಿಂದಾಗಿ ಈತನಿಗೆ ‘ಪೆರಿಯಾಳ್ವಾರ್’ ಎಂದರೆ ‘ದೊಡ್ಡಭಕ್ತ’ನೆಂದೂ ಹೆಸರುಂಟು. ಈಗಲೂ, ಈ ದೊಡ್ಡ ಭಕ್ತನ ಸಾಕುಮಗಳಾದ ‘ಆಂಡಾಳ್’ ಕುಮಾರಿಯೇ ಈ ಮಹಿಮಾವಂತಳು. ಭಗವಂತನು ‘ಆಂಡವನ್’ ಆಗಿದ್ದಾನೆ. ಅವನ ಹೆಂಡತಿ ‘ಲಕ್ಷ್ಮಿ’ಯು ಸಹಜವಾಗಿಯೇ ‘ಆಂಡಾಳ್’ ಆಗಿದ್ದಾಳೆ. ಈ ಆಂಡಾಳ್‌ನ ಇನ್ನೊಂದು ಹೆಸರು ‘ಗೋದಾ’ ಎಂದು. ‘ಗೋದಾ’ ಎಂದರೆ, ಸಂಸ್ಕೃತದಲ್ಲಿ ಹಸುವಿನಂತೆ ಮೃದುಸ್ವಭಾವವುಳ್ಳವಳು ಎಂದು. ಇಲ್ಲವೇ, ಹಸುವಿನೊಡನೆ, ಅವುಗಳ ಸೇವೆಯಲ್ಲಿ ಬೆರೆತು, ಗೋವುಗಳ ಒಡನಾಡಿಯಾಗಿ

ರುವವಳು ಎಂದು. ಶ್ರೀ ಕೃಷ್ಣನು ಗೋಪಾಲನಾಗಿರುವಾಗ, ಲಕ್ಷ್ಮಿಯು ಗೋದಾ ಆಗಿರುವುದು ಸಹಜವೇ ಆಗಿರುತ್ತದೆ.

'ಆಂಡಾಳ್' ದೇವಿಯು ಭೂಮಿಯಲ್ಲಿ ಕೇವಲ ಎಳೆಂಟು ವರ್ಷಗಳು ಮಾತ್ರ ಬದುಕಿದ್ದುದೆಂದು ಪ್ರತೀತಿಯಿದೆ. ಇವಳು ಕೇವಲ 'ಅನನ್ಯ' ಭಕ್ತಿಯಿಂದ ಮಾತ್ರವೇ ಶ್ರೀ ರಂಗನಾಥನಲ್ಲಿ ಐಕ್ಯವಾಗಿ ಹೋದಳೆಂದೂ ಹೇಳಲಾಗಿದೆ. ಈ 'ಅನನ್ಯಭಕ್ತಿ' ಮಾರ್ಗವನ್ನು ಶ್ರೀ ವೈಷ್ಣವರು ನಿತ್ಯಾನುಸಂಧಾನ ಮಾಡಬೇಕೆಂಬ ನಿಯಮವೂ ಇದೆ. ಈಗಲೂ, ಹಲವರು ಈ ಮಾರ್ಗದಲ್ಲಿ ನಿರತರಾಗಿದ್ದುಕೊಂಡೇ ಬದುಕುತ್ತಿದ್ದಾರೆ. ಈ ಆಂಡಾಳ್ 'ಆಡಿ' ಮಾಸದ (ತಮಿಳು ವರ್ಷದಲ್ಲಿ ಆಷಾಢಮಾಸ–ಶೂನ್ಯಮಾಸ)ಪೂರ್ವ ಫಲ್ಗುಣೀ (ಪುಬ್ಬಾ) ನಕ್ಷತ್ರದಂದು ಪೆರಿಯಾಳ್ವಾರ್' ಅವರಿಗೆ ಹೂದೋಟದಲ್ಲಿ ಎಳೆಯ ಮಗುವಿನ ರೂಪದಲ್ಲಿ ದೊರೆತಳೆಂದೂ ಹೇಳಲಾಗಿದೆ.

'ಆಂಡಾಳ್' ತಾನು ಭಗವಂತನನ್ನೇ ವರಿಸಬೇಕೆಂಬ ಉತ್ಕಟೇಚ್ಛೆಯುಳ್ಳವಳಾಗಿ ಅದಕ್ಕಾಗಿ 'ತಿರುಪ್ಪಾವೈ' ಎಂಬ ವ್ರತವನ್ನು 'ಧನುರ್ಮಾಸ'ದಲ್ಲಿ ಬ್ರಾಹ್ಮೀ ಮುಹೂರ್ತಕ್ಕೆ ಮೊದಲೇ ನಿದ್ರೆಯಿಂದೆದ್ದು, ನದಿಯಲ್ಲಿ ಮಿಂದು ಬಂದು, ಭಗವಂತನನ್ನು ಭಕ್ತಿಯಿಂದ ಪೂಜಿಸುತ್ತಾ, ಇಡೀ ಮಾಸವನ್ನು ಕಳೆಯುತ್ತಿದ್ದಳೆಂದೂ ಹೇಳಲಾಗಿದೆ. ಈ ಮಾಸವನ್ನು ತಮಿಳಿನಲ್ಲಿ 'ಮಾರ್ಹಳಿ' ಮಾಸವೆಂದು ಹೇಳುತ್ತಾರೆ. ಈ ಮಾಸದಲ್ಲಿ ಚಳಿಯು ಶಿಖರ ಮಟ್ಟ ತಲುಪಿರುತ್ತದೆ. ಈ ಸಮಯದಲ್ಲಿ ಬ್ರಾಹ್ಮೀ ಮುಹೂರ್ತಕ್ಕೆ ಮೊದಲೇ ನಿದ್ರೆಯಿಂದೇಳುವುದು, ನದಿಯಲ್ಲಿ ಮೀಯುವುದು. ಇವುಗಳಿಗೆ ಖಂಡಿತವಾಗಿ ಶ್ರೀಸಾಮಾನ್ಯನ ಮನಸ್ಸು ಸಮ್ಮತಿಸಲಾರದು. ಆದರೆ, ಈ ಆಂಡಾಳ್ ಸಾಮಾನ್ಯಳಾಗಿರದೆ, ಅಸಾಮಾನ್ಯಳಾಗಿದ್ದು ಈ ವ್ರತಾನುಷ್ಠಾನವನ್ನು ಸುಲಭವಾಗಿ ಮಾಡಿರುತ್ತಾಳೆ. ಇಲ್ಲಿ 'ಭಗವದ್ಭಕ್ತಿ' ಯೊಂದೇ ಮನಸ್ಸಿನಲ್ಲಿದ್ದರೆ, ಇಹ ಕಷ್ಟಗಳೆಲ್ಲವೂ ಗೌಣವಾಗುತ್ತವೆಂಬ ವಿಷಯ ಸ್ಪಷ್ಟವಾಗುತ್ತದೆ. ಆದರೆ, ಈ ಸತ್ಯವನ್ನರಿಯಲು ಎಷ್ಟು ಮಂದಿಗೆ ಒಲವಿದೆ ?

ಈ 'ತಿರುಪ್ಪಾವೈ' ವ್ರತಾಚರಣೆಯು ಅನೇಕ ಶ್ರೀವೈಷ್ಣವ ಕುಟುಂಬದವರಿಗೆ ಸರ್ವ ಸಾಮಾನ್ಯವಾಗಿದೆ. ಆದರೆ, ಈಗಿನ ಮುಖ್ಯವಾದ ವಿಷಯವೆಂದರೆ, ಇಡೀ ವ್ರತಾನುಷ್ಠಾನವನ್ನು ಅಬದ್ಧವಾಗಿ ಆಚರಿಸುತ್ತಿರುವುದು. ಈಗಿನ ಆಚರಣೆಯಲ್ಲಿ 'ಭಕ್ತಿ'ಯೊಂದನ್ನು ಬಿಟ್ಟು, ಬೇರೆಲ್ಲಾ ಬಾಹ್ಯಾಚರಣೆಗಳೂ ಇವೆ. ಆದರೆ, ಭಕ್ತಿಮಾತ್ರವೇ 'ಆಂಡಾಳ್'ಗೆ ಫಲ ನೀಡಿತೆಂಬ ಸಂಗತಿಯು ಇವರಿಗೆ ಮರೆತು ಹೋಗಿದೆ. ನಸುಕಿಗೆ ಮೊದಲೇ ಎದ್ದು, ಬೆಂಕಿಯಿಂದ ಮೈಕಾಯಿಸಿ, ಹಾಗೆಯೇ ಬಿಸಿನೀರನ್ನು 'ಭಾಂಡ' (ಹಂಡೆ)ಯಲ್ಲಿ (ಸೌದೆಯಿಂದಾಗಲೀ, ವಿದ್ಯುತ್ತಿನಿಂದಾಗಲೀ) ಕಾಯಿಸಿ, ಈ ಭಾಂಡಜಲದಿಂದ ಸ್ನಾನ ಮಾಡಿ, ಕೂಡಲೇ 'ಪೊಂಗಲ್'ಗೆ ಒಲೆ ಹತ್ತಿಸಿ, ಒಲೆಯ ಮೇಲಿಟ್ಟು, ಅನಂತರ ಭಗವಂತನ

ಧ್ಯಾನ ಮಾಡುವ, ಈ ದುರಂತ ಆಚರಣೆಯೇ ಸಹಜವಾಗಿ ಹೋಗಿದೆ. ಈ ಅಬದ್ಧಕ್ಕೆ ಮುಕ್ತಿಯಿಲ್ಲವೇ?

ಈ 'ತಿರುಪ್ಪಾವೈ' ವ್ರತವನ್ನು ನಿತ್ಯಜೀವನ, ಜೀವನಶೈಲಿ, ಆರೋಗ್ಯ, ಪರಿಸರ, ಮಾನಸಿಕ ಪ್ರಭಾವಗಳಿಗೆ ಹೋಲಿಸಿದಾಗ, ಹಲವಾರು ವಿಶೇಷ ವಿಚಾರಗಳು ಹೊರ ಬೀಳುತ್ತವೆ.

ಮೊದಲನೆಯದಾಗಿ, ನದಿಯ ನೀರು, ಕೆರೆಯ ನೀರು, ಸರೋವರದ ನೀರು, ಬಾವಿಯ ನೀರು(ಋತು ಜಲ) (ಕೊಳವೆ ಬಾವಿಯ ನೀರಲ್ಲ- ಕೊಳಾಯಿ ನೀರಂತೂ ಅಲ್ಲ, ಗೃಹದಲ್ಲಿ ಶೇಖರಿಸಿರುವ ನೀರಂತೂ ಅಲ್ಲವೇ ಅಲ್ಲ) ಈ ಹೇಮಂತ ಋತುವಿನಲ್ಲಿ ಬ್ರಾಹ್ಮೀಮುಹೂರ್ತಕ್ಕೆ ಮೊದಲು ನಿಸರ್ಗಮಾತೆಯಿಂದ ಕಾಯಿಸಲ್ಪಟ್ಟು ಬೆಚ್ಚಗಿರುತ್ತದೆ. ಇದು ನನ್ನ ಪ್ರತ್ಯಕ್ಷ ಅನುಭವವಾಗಿದೆ. ಅನುಭವ ಸಿದ್ಧಾಂತವಿದು. ಈ ನಿಸರ್ಗದತ್ತ ವರವನ್ನು ಅನುಭವಿಸಲು ಖಂಡಿತವಾಗಿ ಕೆಚ್ಚೆದೆ ಬೇಕು. ಸೂರ್ಯೋದಯವಾಗುತ್ತಿದ್ದಂತೆ, ಈ ಋತುಜಲವು ತನ್ನ ಉಷ್ಣತೆಯನ್ನು ಕಳೆದುಕೊಳ್ಳುತ್ತಾ ಹೋಗುತ್ತದೆ. ಸೂರ್ಯೋದಯದ ಅನಂತರವಂತೂ ಈ ಋತುಜಲವು ತಣ್ಣಗಾಗುತ್ತ ಹೋಗುತ್ತದೆ. ಅಪರಾಹ್ನದಲ್ಲಂತೂ, ತಣ್ಣಗೆ ಕೊರೆಯುತ್ತಿರುತ್ತದೆ. ಇದನ್ನು ಯಾರೂ ನಂಬಲಾರರು. ಈ ಬ್ರಾಹ್ಮೀಮುಹೂರ್ತ ಪೂರ್ವಸ್ನಾನದಿಂದ ಜಡತ್ವವು ತಾನಾಗಿಯೇ ತೊಲಗುತ್ತದೆ. ಈ ನೈಸರ್ಗಿಕ ಉಷ್ಣತೆಯಿಂದ ದೇಹಕ್ಕೆ ಅನಾರೋಗ್ಯ ಉಂಟಾಗುವುದಿಲ್ಲ. ದೇಹವು ರೋಗ ನಿರೋಧಕ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ಹಿಮಗಾಲದಲ್ಲಿ ಜನರಿಗೆ ರೋಗಬಾಧೆಯ ಉಪಟಳವಿರುವ ಸಂಗತಿ ಎಲ್ಲರಿಗೂ ಗೊತ್ತು. ಈ ಕಾಲದಲ್ಲಿ ಮಾನವನು ಬ್ರಾಹ್ಮೀಮುಹೂರ್ತಪೂರ್ವ ಸ್ನಾನದಿಂದ ಆರೋಗ್ಯ ಪೂರಿತನಾಗಿರುತ್ತಾನೆ. ಆರೋಗ್ಯಕ್ಕಿಂತ ಬೇರೆ ಸಂಪತ್ತೇಕೆ ಬೇಕು? (ತಿರು). ಆರೋಗ್ಯವಂತ ಜೀವನವೇ ಈಗಿನ ಸದಾರೋಗಿಯಾಗಿರುವ ಶ್ರೀಸಾಮಾನ್ಯ ಮತ್ತು ವೈದ್ಯರಿಬ್ಬರಿಗೂ ಈ ಸಂಗತಿಯು ಪಥ್ಯವಾಗದಿರಬಹುದು. ಈ ಸಂಗತಿಯನ್ನು ಅರಿಯಲು ಯಾವುದೇ ಪ್ರಾಸಂಗಿಕ ಪ್ರಾತ್ಯಕ್ಷಿಕೆಯೂ ಲಭ್ಯವಿಲ್ಲ. ಕೇವಲ ಸ್ವಾನುಭವ ಮಾತ್ರವೆ ಇದನ್ನು ತಿಳಿಸುತ್ತದೆ. ಆದರೆ, ಈ ಅನುಭವಕ್ಕೆ ಬೇರೊಬ್ಬರ ಅನುಭವವು ಪ್ರಾತ್ಯಕ್ಷಿಕೆಯಾಗಲಾರದು.

ಎರಡನೆಯದಾಗಿ, ಈ ಬ್ರಾಹ್ಮೀಮುಹೂರ್ತ ಪೂರ್ವಸ್ನಾನಕ್ಕೆ ಮೊದಲೇ, ನಿದ್ರೆಯಿಂದೆದ್ದು ಬಂದ ಕೂಡಲೇ, ಮನೋಜಡತ್ವವು ಸಾಕಷ್ಟು ದೂರವಾಗುತ್ತದೆ. ಈ ಸ್ನಾನದಿಂದ ಜಡತ್ವವು ಸಂಪೂರ್ಣವಾಗಿ ತೊಲಗಿ ಹೋಗುತ್ತದೆ. ಸ್ನಾನೋತ್ತರ ಜಡತ್ವವಂತೂ ಇರುವುದೇ ಇಲ್ಲ. ಮನೋಲ್ಲಾಸವು ನೈಸರ್ಗಿಕವಾಗಿ ಲಭಿಸುತ್ತದೆ. ಮನೋಲ್ಲಾಸದಿಂದ ಚಿಂತೆಗಳು ದೂರವಾಗುತ್ತವೆ. ಚಿಂತಾರಹಿತ ಮನೋಲ್ಲಾಸಕ್ಕಿಂತ ಬೇರೇನು ಬೇಕು? ಸಕಲ ದುಃಖಗಳಿಗೂ ಕಾರಣವಾಗಿರುವ ಚಿಂತೆಯೇ ಇಲ್ಲದಾಗ,

ಸಂತೋಷಭರಿತ ಮನಸ್ಸಿಗೆ ಮಿಗಿಲಾದ ಸಂಪತ್ತು ಯಾವುದಿದೆ ? ಯಾವುದೇ ವಿಧವಾದ ಇಹಸಂಪತ್ತಿಗಿಂತ, ಚಿಂತಾರಹಿತ ಮನೋಲ್ಲಾಸವು ಅತ್ಯಂತ ಮಿಗಿಲಾದುದಲ್ಲವೇ ? ಇದುವೇ ಈ ಸ್ನಾನದಿಂದ ಲಭಿಸುವ 'ತಿರುಪ್ಪಾವೈ'. ಸದಾ ಚಿಂತಾಭ್ರಾಂತರಾಗಿರುವ ಶ್ರೀಸಾಮಾನ್ಯ ಮತ್ತು ಮನೋವಿಜ್ಞಾನಿಗಳು ಈ ವಿಚಾರವನ್ನು ಖಂಡಿತಾ ಅಲ್ಲಗಳೆಯುತ್ತಾರೆ. ಏಕೆಂದರೆ, ಈ ವಿಚಾರದ ಅರಿವಿಗೆ ಸ್ವಾನುಭವ ಮಾತ್ರವೇ ಮಾರ್ಗವಾಗಿದ್ದು, ಇದಕ್ಕೆ ಅವರಾರೂ ಸಿದ್ಧರಿಲ್ಲದಿರುವುದೇ ಆಗಿದೆ.

ಇನ್ನು ಸ್ನಾನಮಾಡಿ ದಡಕ್ಕೆ ಬಂದು ವಸ್ತ್ರದಿಂದ ಒರೆಸಿಕೊಳ್ಳುವಾಗ ಮತ್ತು ಅನಂತರ ಖಂಡಿತವಾಗಿಯೂ ಚಳಿಯು ಉತ್ಕಟವಾಗುತ್ತದೆ. ಇದಕ್ಕೆ ಪರಿಹಾರವೇನು ? ಎಂಬುದೇ ಪ್ರಶ್ನೆಯು. ಇದಕ್ಕೆ ಪರಿಹಾರವೆಂದರೆ, ಭಗವಂತನ ಧ್ಯಾನ. ಇದನ್ನು ಭಕ್ತಿಪೂರ್ವಕವಾಗಿ ಮಾಡುತ್ತಿದ್ದರೆ, ಇಹ ಜ್ಞಾನವು ಮರೆಯಾಗುತ್ತದೆ. ನೈಸರ್ಗಿಕವಾಗಿ ದೇಹಾರೋಗ್ಯ, ಮನೋಲ್ಲಾಸಗಳು ಸುಲಭವಾಗಿ ಲಭಿಸುವುದಾದರೆ, ಭಕ್ತಿಯಿಂದ ಭಗವಂತನನ್ನು ಕುರಿತು ಏಕೆ ಧ್ಯಾನ ಮಾಡಬಾರದು ? ಅನೇಕ ಚಿಂತಾಪರಿಹಾರಗಳಿಗೆ 'ಧ್ಯಾನ'ವು ಉತ್ತಮ ಮಾರ್ಗವೆಂದು ಇತ್ತೀಚೆಗೆ ಮನೋವಿಜ್ಞಾನಿಗಳು ಹೇಳುತ್ತಿದ್ದಾರೆ. ಆದರೆ, ಈ ಸಂಗತಿಯು ನಮ್ಮ ಪೂರ್ವಜರಿಗೆ ಬಹು ಹಿಂದೆಯೇ ತಿಳಿದಿತ್ತು. ಇನ್ನು ಭಕ್ತಿಯಿಂದ ಭಗವಂತನನ್ನು ಧ್ಯಾನ ಮಾಡುವುದು ಹೇಗೆ ? ಅವನನ್ನು ಕುರಿತು ಹಾಡುವುದು, ಅವನಲ್ಲಿ 'ಅನನ್ಯಭಕ್ತಿ' ಮೂಡಿದಾಗ ಹಾಡು ತಾನಾಗಿಯೇ ಬಾಯಿಯ ಮೂಲಕ ಹೊರಬರುತ್ತದೆ. ಆದರೆ, ಇದನ್ನು ಈಗಿನ ವಿಜ್ಞಾನವಂತರು ಹೇಗೆ ಅರಿಯುತ್ತಾರೆ ? ಒಪ್ಪುತ್ತಾರೆ ? ಖಂಡಿತಾ ಸಾಧ್ಯವಿಲ್ಲ.

ಇನ್ನು ಪರಿಸರದ ಸಂಗತಿಯೆಂದರೆ, ಈ ಬ್ರಾಹ್ಮೀ ಮುಹೂರ್ತದಲ್ಲಿ ಪರಿಸರವು ಯಾವುದೇ ವಿಧವಾದ ಮಾನವ ಲೌಕಿಕ ಚಟುವಟಿಕೆಗಳಿಂದ ಕೂಡಿರದೆ, ನಿರ್ಮಲ, ನಿಃಶಬ್ದದಿಂದ ಕೂಡಿದ್ದು, ಉಲ್ಲಾಸಮಯವಾಗಿರುತ್ತದೆ. ಈ ಉಲ್ಲಾಸಮಯ ಸಮಯವು ಅಷ್ಟು ಸುಲಭವಾಗಿ ಲಭಿಸುವುದಾದರೆ, ಯಾರು ತಾನೇ ಬೇಡವೆನ್ನುತ್ತಾರೆ ? ಈ ಉಲ್ಲಾಸಮಯ ಪರಿಸರಕ್ಕಿಂತ ಮಿಗಿಲಾದ ಸಂಪತ್ತು ಏಕೆ ಬೇಕು ? ಈ ಉಲ್ಲಾಸಪೂರ್ಣ ಪರಿಸರವೇ ಲಭಿಸುವ 'ತಿರುಪ್ಪಾವೈ'.

ಇನ್ನು ನಿತ್ಯಜೀವನಕ್ಕೆ ಬಂದಾಗ, ಕೃಷಿ ಆಧಾರಿತ ಜೀವನದಲ್ಲಿ ಈ 'ಧನುರ್ಮಾಸ'ವು 'ಸುಗ್ಗಿ'ಯ ಕಾಲವು. ಸುಗ್ಗಿಗೆ ಮೊದಲು ಫಸಲಿನ ಕುಯಿಲಾಗಬೇಕು. ಯಾರೂ ತೋಟ, ಹೊಲ, ಗದ್ದೆಯ ಕೆಲಸಗಳಿಂದ ವಿಮುಖರಾಗುವಂತೆಯೇ ಇಲ್ಲ. ಅದಕ್ಕಾಗಿಯೇ, ಈ ಮಾಸವು ಬೇರೆಲ್ಲ ಕಾರ್ಯಗಳಿಗೆ ಅಶುಭವಾಗಿದ್ದು, ಶೂನ್ಯಮಾಸವಾಗಿದೆ. 'ಶೂನ್ಯ'ವೆಂದರೆ 'ಬರಿದು' ಎಂದರ್ಥವಲ್ಲ. 'ಸಂಪೂರ್ಣ' ಎಂದು ಅರ್ಥೈಸಬೇಕು. ಏಕೆಂದರೆ, ಮನುಷ್ಯನು ಈ ಮಾಸದಲ್ಲಿ ಫಸಲಿನ ಕುಯಿಲಿಗೆ ಸಂಪೂರ್ಣವಾಗಿ ತನ್ನನ್ನು

ತೊಡಗಿಸಿಕೊಳ್ಳದಿದ್ದರೆ, ಮುಂದಿನ ಇಡೀ ವರ್ಷದ ಬಾಳುವೆಯು ಶೂನ್ಯವಾಗುತ್ತದೆ. ಸೇವಿಸಲು ಅನ್ನಾಹಾರಾದಿಗಳೇ ಇರುವುದಿಲ್ಲ. ಪೇಟೆಯ ಜನರೇನೋ ಅಂಗಡಿಯಲ್ಲಿ ಯಾವಾಗ ಬೇಕಾದರೂ ಆಹಾರ ಪದಾರ್ಥಗಳನ್ನು ಕೊಳ್ಳಲು ಅವರ ಬಳಿ ಹಣವಿರಬಹುದು, ಇಲ್ಲವೇ, ಸಾಲ ದೊರೆಯಬಹುದು. ಆದರೆ, ಕೇವಲ ನಿಸರ್ಗಸಂಪತ್ತನ್ನು ಮಾತ್ರ ಹೊಂದಿರುವ, ಧನವಂತರಾಗಿರದ ನಮ್ಮ ಕೃಷಿಕರು, ಕುಯಿಲಿನ ಕಾಲದಲ್ಲಿ ಧಾನ್ಯ ಸಂಗ್ರಹಿಸದಿದ್ದರೆ, ಅನಂತರ ತಮ್ಮ ಮುಂದಿನ ವರ್ಷದ ಅನ್ನಾಹಾರಾದಿಗಳಿಗೇನು ಮಾಡಬೇಕು ? ಅವರು ಪೇಟೆಗೆ ಹೋಗುವುದೇ ಒಂದು ದುಸ್ತರ ಕಾರ್ಯವಾಗಿರುವಾಗ ಇನ್ನು ಅಲ್ಲಿಂದ ಕೊಳ್ಳಲು ಅವರಲ್ಲಿ ಹಣವೆಲ್ಲಿಂದ ಬರಬೇಕು ? ಸಾಲ ಪಡೆಯೋಣವೆಂದರೆ, ನೀಡುವವರಾರು? ಈ ಎಲ್ಲ ಚಿಂತೆಗಳಿಗೆ ಸುಲಭೋಪಾಯವೆಂದರೆ, ಕುಯಿಲಿನ ಈ ಮಾಸದಲ್ಲಿ ಕೃಷಿಕಾರ್ಯದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುವುದೇ ಆಗಿದೆ. ಕೃಷಿಕಾರ್ಯಕ್ಕೆ ಮನೆಯಲ್ಲಿ ಎಷ್ಟು ಜನರಿದ್ದರೂ ಸಾಲದು. ಎಲ್ಲರೂ ಬೇಕಾಗಿರುವಾಗ. ಯಾರನ್ನು ಬಿಡುವುದು? ಇನ್ನು ಕೃಷಿಕಾರ್ಯವನ್ನು ಬಿಸಿಲು ಬಂದನಂತರ ಮಾಡಲು ಸಾಗುವುದಿಲ್ಲ. ಅದಕ್ಕಿರುವ ಏಕೈಕ ಪರಿಹಾರ ಮಾರ್ಗವೆಂದರೆ, ನಸುಕಿನಲ್ಲಿಯೇ ಹೊಲ, ಗದ್ದೆ, ತೋಟಗಳಿಗೆ ಹೋಗಿ ಕುಯಿಲಿನ ಕಾರ್ಯ ಮಾಡುವುದು. ನಸುಕಿನಲ್ಲಿ ಎದ್ದರೆ, ಮನೋಜಡತ್ವ, ದೇಹಜಡತ್ವ ನಿವಾರಣೆಗೆ ಸಾಕಷ್ಟು ಕಾಲ ಬೇಕು. ಅದು ದೂರವಾದಾಗ ಬಿಸಿಲೇರಿಬಿಟ್ಟಿರುತ್ತದೆ. ಕಾರ್ಯಸಾಗಲಾರದು. ಇದಕ್ಕೆ ಪರಿಹಾರವೇನು ? ಬ್ರಾಹ್ಮೀ ಪೂರ್ವ ಮುಹೂರ್ತದಲ್ಲಿಯೇ ನಿದ್ರೆಯಿಂದೆದ್ದು, ನದೀಸ್ನಾನ ಮಾಡಿ, ಉಲ್ಲಾಸದಿಂದ ದೈವಭಕ್ತಿಯಿಂದ ಕೂಡಿ, ಸ್ನಾನೋತ್ತರ ಜಡತ್ವದಿಂದ ದೂರವಾಗಿ, ಭಗವಂತನ ಪ್ರಸಾದವನ್ನು ಸ್ವೀಕರಿಸಿ, ಸೇವಿಸಿ, ಉದರ ಪೂಜೆಯನ್ನೂ ಮಾಡಿಕೊಂಡು, ಸೂರ್ಯೋದಯಕ್ಕೆ ಸರಿಯಾಗಿ, ನಿಸರ್ಗದತ್ತ ಬೆಳಕಿನಲ್ಲಿ ಕೃಷಿ ಕ್ಷೇತ್ರಗಳಿಗೆ ಹೋಗಿ, ಕೃಷಿ ಕಾರ್ಯ ಮಾಡುವುದರಿಂದ, ಮುಂದಿನ ವರ್ಷದ ಆಹಾರ ಸಂಗ್ರಹಣೆಯು ಸುಲಭವಾಗುತ್ತದೆ. ಇದರಿಂದ, ಮುಂದಿನ ವರ್ಷವು ಸಂಪದ್ಭರಿತವಾಗಿರುವುದು ಅಲ್ಲವೇ ? ಈ ಬ್ರಾಹ್ಮೀ ಮುಹೂರ್ತ ಪೂರ್ವ ಸ್ನಾನ, ಭಗವದಾರಾಧನೆ, ನೈವೇದ್ಯ ಪ್ರಾಶನದಿಂದ, ಮುಂದಿನ ವರ್ಷದ ಅನ್ನಾಹಾರಾದಿ ಸಂಗ್ರಹಣೆಯ ಚಿಂತೆಯು ದೂರವಾಗುವುದಾದರೆ, ಈ ವ್ರತವೇಕೆ ಅನುಷ್ಠಾನ ಯೋಗ್ಯವಾಗಿಲ್ಲ ? ನಮಗೆ ಶ್ರೀಮಂತಿಕೆಯನ್ನು ನೀಡುವ ಈ 'ವ್ರತ'ವನ್ನು ನಾವೇಕೆ ಅನುಷ್ಠಾನ ಮಾಡಬಾರದು ? ಭಗವನ್ನಿವೇದನದ ಪ್ರಾಶನದ ಅನಂತರ ನಾವು ಕೃಷಿ ಕಾರ್ಯದಲ್ಲಿ ನಿರತರಾಗಿರುವಾಗ, ಸುಲಭವಾಗಿ ಪಚನಕ್ರಿಯೆಯಾಗುತ್ತದೆ. ಕಾರ್ಯದಲ್ಲಿ ಸೋಲು ಆಗುವುದೇ ಇಲ್ಲ. ಮನಸ್ಸು ಮತ್ತು ದೇಹಗಳೆರಡೂ ಉಲ್ಲಾಸಪೂರಿತವಾಗಿರುವಾಗ ಕೃಷಿ ಕಾರ್ಯವು ಸುಲಭವಾಗಿ ಸಾಗುತ್ತದೆ. ಇದರಿಂದ, ಬದುಕು ಸಂಪದ್ಭರಿತವಾಗುತ್ತದೆ. ಇದನ್ನು ಕುಟುಂಬದ ಸದಸ್ಯರೆಲ್ಲರೂ ಅನುಷ್ಠಾನ ಮಾಡುವುದರಿಂದ, ಇಡೀ ಕುಟುಂಬದ ಬದುಕು ಶ್ರೀಮಂತವಾಗಿಯೇ ಇರುತ್ತದೆ. ಹಾಗೆಯೇ, ಗ್ರಾಮಸ್ಥ

ರೆಲ್ಲರೂ ಮಾಡುವುದರಿಂದ, ಇಡೀ ಗ್ರಾಮೀಣ ಬದುಕು ಶ್ರೀಮಂತವಾಗಿರುತ್ತದೆ. ಹೀಗೆ, ಈ ನಿಶ್ಚಿಂತ ಶ್ರೀಮಂತಿಕೆಯು ಈ ವ್ರತಾನುಷ್ಠಾನದಿಂದ ಲಭಿಸುವಾಗ, ಏಕೆ ನಾವು ವ್ರತವನ್ನು ಅನುಷ್ಠಿಸಬಾರದು ? ಇದು ಗ್ರಾಮೀಣ ಕೃಷಿಬದುಕಿನ ಅಂಗವಾಗಿ ಹೋಗಿದೆ. ಆದರೆ, ಇದನ್ನು ಗುರುತಿಸುವವರು, ಅರಿಯುವವರು, ಬೇಕಾಗಿದ್ದಾರೆ. ಹೀಗೆ ಬದುಕಿನ ಒಂದು ಅಂಗವಾಗಿರುವ ಈ ತಿರುಪ್ಪಾವೈ ವ್ರತದಿಂದ ಯಾರಿಗೆ ತಾನೇ ತೊಂದರೆಯಾಗುವುದು ? ಬಹುಶಃ ಆಲಸಿಗೆ ಮಾತ್ರ. ಹೀಗೆ ಈ ವ್ರತವು ಜೀವನ ಶೈಲಿಯ ಒಂದು ಅಂಗವಾಗಿದೆ. ಇದನ್ನು ನಾವು ಸರಿಯಾಗಿ ಗುರುತಿಸಿ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಯಾವುದೇ ಅವಿವೇಕದಿಂದ ಕೂಡಿದ, ಅಬದ್ಧಗಳಿಂದ ಅವಘಡ ಉಂಟಾಗುವುದೇ ವಿನಾ ಸುಖ ನೆಮ್ಮದಿಯಲ್ಲ. ನಮ್ಮ ಅವಿವೇಕಕ್ಕೆ 'ವ್ರತ'ವನ್ನು ದೂಷಿಸುವುದು ಸುಲಭ. ಆದರೆ, ಅದನ್ನು ಅರಿಯುವವರು ವಿರಳ.

ಇನ್ನು ನಿತ್ಯಜೀವನದಲ್ಲಿ 'ತಿರುಪ್ಪಾವೈ' ನಿತ್ಯಾನುಸಂಧೇಯವಾಗಿರಬೇಕೆಂದು ಹೇಳಲಾಗಿದೆ. ಹೀಗೆಂದರೇನು ? ಇದು ನಿತ್ಯಾನು ಸಂಧೇಯವೇಕೆ ? ಈ ವಿತಂಡ ವಾದಗಳ ಪ್ರಶ್ನೆಗೆ ಉತ್ತರವೇ ಇಲ್ಲವಾದ್ದರಿಂದ, ಇಡೀ ವ್ರತವೇ ಅಸಂಬದ್ಧವೆಂದು ಸಾಮಾನ್ಯರು ಹೇಳುತ್ತಾರೆ. ಮೊದಲು 'ಧನುರ್ಮಾಸ'ದಲ್ಲಿ ಈ 'ತಿರುಪ್ಪಾವೈ' ವ್ರತಾನುಷ್ಠಾನದಿಂದ ಇಡೀ ವರ್ಷವು ಸಂಪದ್ಭರಿತವಾಗಿರುತ್ತದೆ. ಹಾಗೆ ಈ ಇಡೀ ವರ್ಷಕ್ಕೆ ನೆಮ್ಮದಿ ನೀಡುವ ಈ ಭಗವದ್ಭಕ್ತಿಯನ್ನು ನಾವೇಕೆ ಇಡೀ ವರ್ಷ ಇಟ್ಟುಕೊಳ್ಳಬಾರದು ? ಈ ಭಗವದ್ಭಕ್ತಿಯಿಂದ ಸರ್ವದಾ ಕೂಡಿರುವವನು ಯಾವುದೇ ವಿಧವಾದ ದುಷ್ಕಾರ್ಯಗಳಿಗೆ ಆಕರ್ಷಿತನಾಗದೆ, ಸದ್ಗುಣಿಯಾಗಿಯೇ ಇರುತ್ತಾನೆ. ಭಗವದ್ಭಕ್ತರು ಸದಾ ಸಂತೋಷದಿಂದ ಕೂಡಿದ್ದು, ಯಾವುದೇ ದುಷ್ಕಾರ್ಯಗಳಲ್ಲಿಯೂ ಅವರು ತೊಡಗುವುದಿಲ್ಲ. ಸದಾಕಾಲ ದುಷ್ಕಾರ್ಯಗಳಿಂದ ದೂರವಿರುತ್ತಾರೆ. ಪ್ರತಿದಿನವೂ ಈ ಪದ್ಯಮಾಲೆಯ ಒಂದೆರಡು ಪದ್ಯಗಳನ್ನಾದರೂ ಭಗವದಾರಾಧನೆಯಲ್ಲಿ ಹಾಡುವ ಪದ್ಧತಿಯಿದೆ. ಈ ಗಾನವಿಧಾನಕ್ಕೆ 'ಶಾತ್ತುಮುರೈ' ಅಂದರೆ 'ಸಮರ್ಪಣ'ವೆಂದು ಹೆಸರು. ಅಂದರೆ, ನಿಸರ್ಗವನ್ನು ಭಗವಂತನಂತೆ ಪೂಜಿಸುತ್ತಾ, ತಮಗೆ ವರ್ಷವಿಡೀ ಸಂಪದ್ಭರಿತ ಜೀವನ ನೀಡುವ ಈ ಭಗವಂತನನ್ನು ನಿತ್ಯವೂ ಸ್ಮರಿಸುವುದರಿಂದ, ನಿಸರ್ಗದೊಡನೆ ಇರುವ ಮಾನವ ಸಂಬಂಧದಿಂದ ನಿಸರ್ಗಸಂರಕ್ಷಣೆಯಾಗುತ್ತದೆ. ಇದರಿಂದ, ಲೋಕಕಲ್ಯಾಣವಾಗುವುದೇ ವಿನಾ ಯಾವುದೇ ಅವಘಡವಾಗಲಾರದು. ನಿಸರ್ಗ ಸಂರಕ್ಷಣೆಯು ಜೀವನದಲ್ಲಿ ಮಿಳಿತವಾಗಿರುವ ಇದಕ್ಕಿಂತ ಉತ್ತಮ ನಿತ್ಯಜೀವನವೇಕೆಬೇಕು? ನಿಸರ್ಗ ಸಂಪತ್ತಿನ ರಕ್ಷಣೆಯಿಂದ ಮಾತ್ರವೇ ಮಾನವಜೀವನ ಸಂಪದ್ಭರಿತವಾಗಿರುವುದೆಂದು ಅರಿವು ಎಷ್ಟು ಜನಕ್ಕಿದೆ ? ಹೀಗೆ ನಿರಂತರ ಸಂಪದ್ಭರಿತ ಜೀವನವನ್ನು ನಮಗೆ ನೀಡುವ ಈ 'ತಿರುಪ್ಪಾವೈ' ಪದ್ಯಮಾಲೆ ನಿತ್ಯಾನುಸಂಧೇಯವಾಗಬಾರದೇಕೆ? ಹೀಗೆ ನಾವು ನಮ್ಮ

ಲ್ಲರ ಸಂಪೂರ್ಣಬಾಳುವೆಯನ್ನು ಅತ್ಯಂತ ಸುಲಭವಾಗಿ ಸಂಪದ್ಭರಿತ ಮಾಡಿಕೊಳ್ಳುವ ಈ 'ತಿರುಪ್ಪಾವೈ' ಪದ್ಯಮಾಲೆಯು ಹೇಗೆ ಅಸಂಬದ್ಧವಾಗುವುದು ?

ಈ ಪದ್ಯಮಾಲೆಯಲ್ಲಿ ಮೂವತ್ತು ಪದ್ಯಗಳಿವೆ. ಈ ಪದ್ಯಗಳನ್ನು ತಮಿಳಿನಲ್ಲಿ 'ಪಾಶುರ'ವೆನ್ನುತ್ತಾರೆ. ಪ್ರತಿಯೊಂದು ಪಾಶುರದಲ್ಲಿಯೂ ಭಕ್ತಿಯು ತುಂಬಿ ತುಳುಕುತ್ತಿದೆ. ಮಾನವ–ನಿಸರ್ಗ ಸಂಬಂಧವನ್ನು ಪದ್ಯರೂಪದಲ್ಲಿ ವಿವರಿಸಲಾಗಿದೆ. ಭಗವದ ಕ್ತಿಯು ಇಹ ಕಷ್ಟ ಕಾರ್ಪಣ್ಯಗಳನ್ನು ಕಡೆಗಣಿಸಿ, ಮಾನವನು ತನ್ನ ಅನಂತಸುಖವನ್ನು ಹೇಗೆ ರಕ್ಷಿಸಿಟ್ಟುಕೊಳ್ಳಬಹುದು ಎಂಬುದನ್ನು ಈ ಪದ್ಯಗಳು ತಿಳಿಸುತ್ತವೆ. ಪ್ರತಿದಿನಕ್ಕೂ ಒಂದೊಂದು 'ಪಾಶುರ' ಗಾನವಿದ್ದು; ಇದು ಇಡೀ ಮಾಸದಲ್ಲಿ ಮಾನವ–ನಿಸರ್ಗ ಸಂಬಂಧವನ್ನು ಅರಿಯುವ, ಪುನರವಲೋಕನ ಮಾಡಿಕೊಳ್ಳುವ ಸಂಗತಿಯಾಗಿದೆ. ಈ ಅರಿವು–ಪುನರವಲೋಕನದಿಂದ ಜೀವನವು ವರ್ಷವಿಡೀ ಶ್ರೀಮಂತಗೊಳ್ಳುವುದಾದರೆ, ಈ ಸುಲಭಸಾಧ್ಯವ್ರತವನ್ನು ಮಾನವನು ಏಕೆ ಅನುಷ್ಠಾನ ಮಾಡಬಾರದು ?

— —

# ಕೇಶಿರಾಜನ ಶಬ್ದಮಣಿ ದರ್ಪಣದ ಮತ್ತೊಂದು ರೂಪದ ಪ್ರತಿ

ಜಿ. ಎ. ಶಿವಲಿಂಗಯ್ಯ

ಕವಿರಾಜಮಾರ್ಗ ಪ್ರಧಾನವಾಗಿ ಅಲಂಕಾರಶಾಸ್ತ್ರದ ಗ್ರಂಥವಾದರೂ ಅಲ್ಪಾಂಶದಲ್ಲಿ ವ್ಯಾಕರಣದ ಸೂಚನೆಗಳು ಅದರಲ್ಲಿ ಇವೆ. ವ್ಯಾಕರಣಶಾಸ್ತ್ರವನ್ನು ಕುರಿತು ಬರೆದ ಕೃತಿ ಶಬ್ದಸ್ಮೃತಿ. ಇದರ ಕರ್ತೃ ನಾಗವರ್ಮ. ಕನ್ನಡ ವ್ಯಾಕರಣ ಭಾರತದಾದ್ಯಂತ ಪರಿಚಿತವಾಗಲಿ ಎನ್ನುವ ಉದ್ದೇಶದಿಂದ ನಾಗವರ್ಮನು "ಕರ್ಣಾಟಕ ಭಾಷಾ ಭೂಷಣಂ" ಎಂಬ ಹೆಸರಿನಲ್ಲಿ ಸಂಸ್ಕೃತ ಭಾಷೆಯಲ್ಲಿ ರಚಿಸಿರುತ್ತಾನೆ. ಈ ಕೃತಿಗಳು ಮುಂದಿನ ವೈಯಾಕರಣರಿಗೆ ತನ್ನ ಸ್ವಂತಿಕೆಯಿಂದ ಮೂಲಕೃತಿಯನ್ನೇ ಮರೆಮಾಡುವಷ್ಟು ಪ್ರತಿಭೆಯಿಂದ ಕೇಶಿರಾಜನು 'ಶಬ್ದಮಣಿದರ್ಪಣಂ' ಎಂಬ ಹೆಸರಿನಲ್ಲಿ ಕನ್ನಡ ವ್ಯಾಕರಣವನ್ನು ರಚಿಸಿರುತ್ತಾನೆ. ನ ಭೂತೋ ನ ಭವಿಷ್ಯತಿಎನ್ನುವಂತೆ ಈ ಕೃತಿಯು ಕನ್ನಡದ ವಿದ್ವಾಂಸರಿಗೆ ಅಚ್ಚುಮೆಚ್ಚಿನ ಹೊತ್ತಿಗೆಯಾಗಿದೆ. ಇದರ ಮೇಲಿನ ಪ್ರೀತಿಯಿಂದ, ಭಕ್ತಿಯಿಂದ 'ಶಬ್ದಮಣಿಸ್ವಾಮಿ' ಎಂಬ ಹೆಸರನ್ನೂ ಇಟ್ಟುಕೊಂಡಿದ್ದಾರೆ. ವ್ಯಾಕರಣವನ್ನೇ ಬೋಧಿಸುವ ಕಾರಣದಿಂದಾಗಿ ಕೆಲವು ಮತಗಳು 'ಶಬ್ದಮಣಿದರ್ಪಣದ ಮತ' ಎಂಬ ಹೆಸರಿನಲ್ಲಿ ಅಸ್ತಿತ್ವದಲ್ಲಿದ್ದುವು ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ.

ಈ ದರ್ಪಣದಲ್ಲಿರುವ ಸೂತ್ರಗಳಿಗೆ ಅವುಗಳ ಅರ್ಥವು ಸ್ಪಷ್ಟವಾಗಿ ತಿಳಿಯಲಿ ಎಂಬ ಸದುದ್ದೇಶದಿಂದ ಕೇಶಿರಾಜನೇ ವೃತ್ತಿಯನ್ನು ಬರೆದಿದ್ದಾನೆ. ಆದ್ದರಿಂದ ಕೇಶಿರಾಜನೇ ಬರೆದ ವೃತ್ತಿಗಳಿಗೆ ಅರ್ಥವೃತ್ತಿಯೆಂದು ಹೇಳಬಹುದು. ನಿಟ್ಟೂರು ನಂಜಯ್ಯನೆಂಬ ವ್ಯಾಕರಣ ವಿದ್ವಾಂಸನು ಇದೇ ಸೂತ್ರಗಳಿಗೆ ಟೀಕೆಗಳನ್ನು ಬರೆದಿರುತ್ತಾನೆ. ಇದರಿಂದ ಓದುಗರಿಗೆ ಇನ್ನಷ್ಟು ಅನುಕೂಲವಾಯಿತು. ಲಿಂಗಣಾರಾಧ್ಯನೆಂಬ ಮತ್ತೊಬ್ಬ ವ್ಯಾಕರಣ ವಿದ್ವಾಂಸನು ಇದೇ ಸೂತ್ರಗಳಿಗೆ (ಕೇಶಿರಾಜನ ವೃತ್ತಿಯು ಇವನಿಗೆ ತೃಪ್ತಿಯನ್ನು ಕೊಟ್ಟಿರಲಾರದುದರಿಂದ) ಹೊಸದಾಗಿ ವೃತ್ತಿಯನ್ನು ಬರೆದಿದ್ದಾನೆ. ಇವನ ಮಾತಿನಂತೆ ಇವನ ವೃತ್ತಿಯು ಅನ್ವಯವೃತ್ತಿಯಾಗಿದೆ. ಶ್ರೀ ಡಿ.ಕೆ. ಭೀಮಸೇನರಾಯರಿಗೆ ದೊರೆತ ಶಬ್ದಮಣಿದರ್ಪಣಕ್ಕೆ ಭಿನ್ನರೀತಿಯ ವ್ಯಾಖ್ಯಾನವಿರುವುದು ಕಂಡುಬಂದಿದೆ. ಇನ್ನೂ ಕೆಲವರು ದರ್ಪಣದ ಸೂತ್ರಗಳಿಗೆ ವೃತ್ತಿಯನ್ನು ಬರೆದಿದ್ದರೂ ಅವುಗಳಾವುವೂ ಲಭ್ಯವಾಗಿಲ್ಲ.

ಇದುವರೆಗೆ ಪ್ರಕಟವಾದ ಶಬ್ದಮಣಿದರ್ಪಣದ ಆವೃತ್ತಿಗಳು ಹನ್ನೆರಡು ಮಾತ್ರ. ಅವು ಇಂತಿವೆ—

1. ಜೆ. ಗೆರೆಟ್ — 1868
2. ಕಿಟ್ಟೆಲ್ — 1872
3. ,, — 1897
4. ಪಂಜೆಮಂಗೇಶರಾಯರು — 1920
5. ,, — 1965
6. ಕನ್ನಡ ಸಾಹಿತ್ಯ ಪರಿಷತ್ತು — 1920
7. ಲಿಂಗಣಾರಾಧ್ಯ ವೃತ್ತಿಯಿಂದ ಕೂಡಿದ್ದು, ಮದ್ರಾಸು ವಿ.ವಿ. — 1938
8. ಪ್ರೊ. ಡಿ. ಎಲ್. ನರಸಿಂಹಾಚಾರ್ — 1959
9. ಪ್ರೊ. ಡಿ. ಎಲ್. ನರಸಿಂಹಾಚಾರ್ — 1964
10. ಪ್ರೊ. ಡಿ. ಎಲ್. ನರಸಿಂಹಾಚಾರ್ — 1968
11. ಪ್ರೊ. ಡಿ. ಕೆ. ಭೀಮಸೇನರಾವ್ — 1977
12. ಡಾ. ಎಲ್. ಬಸವರಾಜು — 1986

ಶಬ್ದಮಣಿದರ್ಪಣದ ಮೂಲ ಸ್ವರೂಪವನ್ನು ವ್ಯಾಖ್ಯಾನಕಾರರಿಂದ ಮತ್ತು ಇತರರಿಂದ ಅದು ಪಡೆದ ರೂಪಾಂತರವನ್ನು ಡಾ. ಎಲ್. ಬಸವರಾಜು ಅವರು ಅವರಿಗೆ ದೊರೆತ 37 ಹಸ್ತಪ್ರತಿಗಳ ಸಹಾಯದಿಂದ ಸವಿಸ್ತಾರವಾಗಿ ಪ್ರಮಾಣಭೂತವಾಗಿ ಪ್ರಸ್ತುತಪಡಿಸಿದ್ದಾರೆ.

ಓಲೆಗರಿ ಗ್ರಂಥಗಳ ಅನ್ವೇಷಣೆಗೆ ಹೋಗಿದ್ದಾಗ (ಎಲ್ಲಿ ಎಂಬುದು ನೆನಪಿಲ್ಲ) ಕೇವಲ 2 ಗರಿಗಳು ಅಂಚು ಮುರಿದು ಹೋಗಿದ್ದವು ದೊರೆತವು. ಅವುಗಳನ್ನು ಪರಿಶೀಲಿಸುವಲ್ಲಿ ಅವು ಶಬ್ದಮಣಿದರ್ಪಣಕ್ಕೆ ಸಂಬಂಧಿಸಿದುವೆಂದು ತಿಳಿಯಿತು. ಮಾಮೂಲಿನಂತೆ ಶಬ್ದಮಣಿದರ್ಪಣದ್ದೆ ಆಗಿದ್ದಿದ್ದರೆ ಈ ಬಗ್ಗೆ ಲೇಖನ ಬರೆಯುವ ಆವಶ್ಯಕತೆಯೇ ಇರಲಿಲ್ಲ. ಗರಿಗಳ ಅಂಚು ಮುರಿದಿದ್ದರೂ, ಈ ಗರಿಗಳಲ್ಲಿ ಲಿಖಿತವಾಗಿರುವ ದರ್ಪಣ ವಿಶಿಷ್ಟವಾದುದಾಗಿದೆ. ಎರಡು ಗರಿಗಳ ನಾಲ್ಕು ಪುಟಗಳಲ್ಲಿ ನಾಮಪ್ರಕರಣಕ್ಕೆ ಸಂಬಂಧಿಸಿದ ಭಾಗವಿದೆ. ದರ್ಪಣದ 46ನೇ ಸೂತ್ರದಿಂದ 73ನೇ ಸೂತ್ರದ ವರೆಗೆ ಬರೆದಿರುವುದನ್ನು ಈ ಗರಿಗಳಲ್ಲಿ ಕಾಣಬಹುದು. ಇದರಲ್ಲಿ ಒಟ್ಟು 27 ಸೂತ್ರಗಳಿವೆ. ಇವುಗಳಲ್ಲಿ ಒಂದೂ ಪೂರ್ಣವಾಗಿಲ್ಲ. ಆದರೂ ಅವುಗಳನ್ನು ಗುರುತಿಸಬಹುದಾಗಿದೆ.

ಸೂತ್ರಗಳನ್ನು ಬರೆದನಂತರ ಪ್ರಯೋಗಗಳನ್ನು ಕೊಡಲಾಗಿದೆ. ವೃತ್ತಿಗಳಿಲ್ಲದಿರುವುದು ಇದರ ವಿಶೇಷತೆ. ಕೆಲವು ಸೂತ್ರಗಳ ಅರ್ಥವನ್ನು ಸ್ಪಷ್ಟಗೊಳಿಸಲು ಪಾಣಿನಿಯ ಅಷ್ಟಾಧ್ಯಾಯಿಯಲ್ಲಿನ ಸೂತ್ರಗಳನ್ನು ಉದಾಹರಿಸಿ, ಅವಕ್ಕೂ ಟೀಕನ್ನು ಬರೆದು ಅನಂತರ ಪ್ರಯೋಗವನ್ನು ಕೊಡಲಾಗಿದೆ.

ಇಂತಹ ರೂಪಾಂತರವನ್ನು ಮಾಡಿದ ದರ್ಪಣದ ರಚಕನು ವೀರಶೈವನಿರಬಹುದೆಂದು ತೀರ್ಮಾನಿಸಬಹುದು. ಏಕೆಂದರೆ ಅವನು ಕೊಟ್ಟಿರುವ ಕೆಲವು ಪ್ರಯೋಗಗಳು ನಮ್ಮ ಅಭಿಪ್ರಾಯವನ್ನು ಸಮರ್ಥಿಸುತ್ತವೆ–

52ನೇ ಸೂತ್ರದ ಪ್ರಯೋಗದಲ್ಲಿ

1) ಪಾರ್ವತಿಯನ್ನು ಕುರಿತ ಸ್ತೋತ್ರವಿದೆ
2) ಅಲ್ಲಮರ ಒಂದು ವಚನವಿದೆ.

57ನೇ ಸೂತ್ರದ ಪ್ರಯೋಗದಲ್ಲಿ

1) ಭಕ್ತರಿಂ ಜಂಗಮರಾರಾಧಿಸಲ್ಪಟ್ಟವರ್

ಎಂಬ ಈ ಪ್ರಯೋಗಗಳು ನಿಜಕ್ಕೂ ಗಮನಾರ್ಹವಾಗಿವೆ. ಶಿವಶರಣರ ವಚನಗಳು ವ್ಯಾಕರಣದ ಪ್ರಯೋಗಗಳಿಗೆ ಅರ್ಹವಾದವುಗಳಲ್ಲವೆ ? ಎಂಬುದು ಆಗಾಗ ನನ್ನ ಮನಸ್ಸನ್ನು ಬಾಧಿಸುತ್ತಿತ್ತು. ಈ ಗರಿಗಳಿಂದ ಆ ಬಾಧೆಯು ಪರಿಹಾರವಾಯಿತು.

ಪುದಿಗುಮದಂತಕೆ ಪುಲ್ಲಿಂ
ಗದವೋಲ್ ಕಿಱಿದೆಡೆಗಳಲ್ಲಿಯೆಲ್ಲಂಸ್ತ್ರೀಲಿಂ
ಗದೊಳಂ ಪುಂನಪ್ಪಿನೊಳಂ
ಪುದಿಗುಂ ತಿಳಿ ಬಹುಳಮಾದುದಾಹರಣೆಗಳಿಂ

ಎಂಬ ಈ ಸೂತ್ರವು ಪ್ರಕ್ಷಿಪ್ತವಾಗಿರುವ ಅಂಶವು ತಿಳಿದ ವಿಷಯವಾಗಿದೆ. ನಮಗೆ ಲಭ್ಯವಿರುವ ಈ ಎರಡು ಗರಿಗಳಲ್ಲಿ ಈ ಸೂತ್ರವಿಲ್ಲದಿರುವುದರಿಂದ ಈ ಗರಿಗಳಲ್ಲಿ ಲಭ್ಯವಿರುವ ದರ್ಪಣವು ಪ್ರಾಚೀನ ಸಂಪ್ರದಾಯಕ್ಕೆ ಸೇರಿದ ಪ್ರತಿಯನ್ನು ಅವಲಂಬಿಸಿರಬಹುದೆಂದು ನಿರ್ಣಯಿಸಬಹುದು.

ಉಭಯಭಾಷಾ ವಿದ್ವಾಂಸನೂ, ಉಭಯ ವ್ಯಾಕರಣ ಪಂಡಿತನೂ ಆಗಿರುವ ಓರ್ವ ವೀರಶೈವ ಧೀವರನಿಂದ ಈ ವಿಶಿಷ್ಟ ರೀತಿಯಲ್ಲಿ ರೂಪಾಂತರಗೊಂಡಿರುವ ದರ್ಪಣವು ಒಂದು ಹೊಸ ಅಧ್ಯಾಯವನ್ನೇ ವ್ಯಾಕರಣದ ಲೋಕದಲ್ಲಿ ತೆರೆದಂತೆ ಕಂಡುಬರುತ್ತದೆ. ಮೂಲಸೂತ್ರಗಳನ್ನೊಳಗೊಂಡು, ಕೇಶಿರಾಜನು ಉದಾಹರಿಸಿರುವ ಕೆಲವು ಪ್ರಯೋಗಗಳನ್ನು ಉಳಿಸಿಕೊಂಡು, ಅವುಗಳ ಜೊತೆಗೆ ಬೇರೆ ಬೇರೆ ಕೃತಿಗಳಲ್ಲಿನ ವಾಕ್ಯಗಳನ್ನು ಪ್ರಯೋಗಕ್ಕೆ ತೆಗೆದುಕೊಂಡು, ಸೂತ್ರಗಳ ಸ್ಪಷ್ಟತೆಗೆ ಪಾಣಿನಿಯ

ಸೂತ್ರಗಳನ್ನು ಬಳಸಿಕೊಂಡು ವೃತ್ತಿರಹಿತವಾದ ಈ ಕೃತಿಯು ಪೂರ್ಣವಾಗಿ ಲಭ್ಯ ವಾಗಿದ್ದರೆ ವ್ಯಾಕರಣಲೋಕಕ್ಕೆ ಅಪಾರವಾದ ಕೊಡುಗೆಯಾಗುತ್ತಿದ್ದುದರಲ್ಲಿ ಸಂಶಯ ವಿಲ್ಲವೆಂದು ಹೇಳಬಹುದು.

ವಿದ್ವಾಂಸರ ಅವಗಾಹನೆಗಾಗಿ ನನಗೆ ದೊರೆತಿರುವ ಎರಡು ಗರಿಗಳ—ನಾಲ್ಕು ಪುಟಗಳ—ಪಾಠವನ್ನು ಯಥಾಕ್ರಮದಲ್ಲಿ ಕೊಡಲಾಗಿದೆ.

## ಲಭ್ಯವಾದ ಗರಿಗಳಲ್ಲಿನ ವ್ಯಾಕರಣದ ಪಾಠ (ನಾಮ ಪ್ರಕರಣದಲ್ಲಿ)

[1ನೇ ಗರಿಯ 1ನೇ ಪಾರ್ಶ್ವ]

॥ ಸೂತ್ರ ॥ ......................
......................ಷ್ಠಿಯಕಾರ
ಕ್ಕಾದೀರ್ಘ............
......................ಭ್ರಮದ ಮೆಯ್ಯೊಳುತ್ಪಾದಿಸುವರ್ ॥೪೬॥

ಪ್ರಯೋಗ : 1) ಮೊಜಿ............ಜಿ ಹತ್ತಿ ಸುತ್ತಿ ಸುಡುತಿದೆ ।
ಉರೆ ಬಿಡಿಸುವರಿಲ್ಲವೋ ಕೃಪಾಳುಗಳಿಲ್ಲಾ ॥
2) ಜೇಡಗಡಾ ಬೇಡಗಡಾ ನಿನಗಾತನೊಳ್ ಬಜಿದೆ.......ನೊಳ್ ॥

॥ ಸೂತ್ರ ॥ ಅವಿಶೇಷದಿನಾ ದೀರ್ಘ
ವ್ಯವಹೃತಿ ಶಬ್ದಾಂತರಾಳದೊಳ್ಪಕ್ಷದಿನು
ದ್ಭವಿಕುಂ ದ್ವಿತೀಯೆಗಂ ಮುಂ
ದವತರಿ................................ ॥ ೪೭ ॥

ಪ್ರಯೋಗ : 1) ...............ಬುಜ ಪತ್ರನೇತ್ರೆಯಾ
ಘನಸ್ತನಂಗಳ್ಬಳೆಗುಂ ಕಿರಾತೆಯಾ ।
ಅಸಿತ್ತನಿತ್ತಂ ವನದೊಳ್ವನೇಚರಂ
ತನತ್ತು ಬಿಲ್ಲಾನದನಂತೆ ಕೀಸುವಂ ।

॥ ಸೂತ್ರ ॥ ..........................
..............................ಲ್ಕ
ತ್ತಲ್ಲಿ ಯುದಂತಕ್ಕೆತ್ವಂ
ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ ॥ ೪೮ ॥

|| ಸೂತ್ರ || ಸವನಿಪುದು ಮುಂದು ಪಿಂದೆಂ
ಬಿನಜಂತ್ಯಕ್ಕಱಿ ವಿ....................
.........................................
ಲ್ಲವರಿಂ ಮೇಲೆಂದು ಪೇೞ್ವ ಬೀೞಕ್ಕರಕಂ || ೪೯ ||

|| ಸೂತ್ರ || ಮೊದಲೆರಡು ವಿಭಕ್ತಿಯೊಳಂ
ಪೊದಱ್ಗುಮಲ್ಕಾಲವಾಚಿಯಂದಿಂದುಂದೆಂ
.....................................
................ರಡುಂ ವಿಭಕ್ತಿಗಂ ಸಪ್ತಮಿಗಂ || ೫೦ ||

|| ಅನ್ಯ । ಸರ್ವನಾಮ್ನೋಂತಸ್ಯತ್ತೇ ದಿಶಿಜೀಚ.

ಸರ್ವನಾಮಃ– ಸರ್ವನಾಮ ಶಬ್ದದ, ಅಂತಸ್ಯ–ಮ................
(ಅದಱಿೊಳ್‌ದೆಶೆಯೊಳ್) ಅತ್ತಲ್ ; ಇದಱಿೊಳ್‌ದೆಶೆಯೊಳ್–ಇತ್ತಲ್ ;
ಉತ್ತಲ್–ಉಲ್ಲದಱಿೊಳ್ ದೆಶೆಯೊಳ್
ಎತ್ತಲ್....................................

1) .............................ಯದು ಕಕಾರಕ್ಕೆಲಿಯಕ್ಕುಂ :-
ಠಾವಿನೊಳ್ ; ಅದಱಿೊಳ್ ಠಾವಿನೊಳ್ – ಅಲ್ಲಿ
ಇದಱಿೊಳ್ ಠಾವಿನೊಳ್ – ಇಲ್ಲಿ
ಉದಱಿೊಳ್ ಠಾವಿನೊಳ್ – ಉಲ್ಲಿ
(ಆವುದಱಿೊಳ್ ಠಾವಿ)ನೊಳ್ – ಆವಲ್ಲಿ.

2) || ಅಂತರ್ಬಿಂದು ಕಾಲೇ || ಸರ್ವನಾಮದ ಮಧ್ಯದೊಳ್ ಬಿಂದುವಕ್ಕುಂ.
ಕಾಲದೊಳ್ : ಅದಱಿೊಳ್ ಕಾಲದೊಳ್ – ಅಂದು
[ಇದಱಿೊಳ್ ಕಾಲದೊಳ್ – ಇಂದು]
[ಉದಱಿೊಳ್] ಕಾಲದೊಳ್–ಉಂದು
ಎಲ್ಲದಱಿೊಳ್ ಕಾಲದೊಳ್–ಎಂದು

ಇಲ್ಲಿ ಮಧ್ಯಕ್ಷರ ಲೋಪಂ : ಆವುದಱಿೊಳ್ ಕಾಲದೊಳ್–ಆವಂದು. ಪ್ರಕಾರ ಮಧ್ಯಕ್ಕೆ ಸೊನ್ನೆಯುಮಕ್ಕುಂ :

ಅದಱಿಂ ಪ್ರಕಾರದಿಂ–ಅಂತು
ಇದಱಿಂ ಪ್ರಕಾರದಿಂ–ಇಂತು

ಉದಱಿಂ ಪ್ರಕಾರದಿಂ-ಉಂತು
ಆವುದಱಿಂ ಪ್ರಕಾರದಿಂ-ಆವಂತು
ಸ್ವರನಾಮದಂತೆ ಚಕಾರಮುಂ ಪೂರ್ವಕ್ಕೆ ದೀರ್ಘಮಕ್ಕುಂ :
ಆಚೆ, ಈಚೆ. ಊಚೆ, ಏಚೆ.

|| ಸೂತ್ರ || ಆಮುಮೆ....................
............................ಕ್ಕುಂ
ಸಮುನಿಸವೆಂದುಂ ಷಷ್ಠಿಯೊ
ಳಮು ಮಿಕ್ಕಿನ ವಿಭಕ್ತಿಗಳ ಮೇಲಿರ್ಕುಂ || ೫೧ ||

|| ಪ್ರಯೋಗಂ || ಪ್ರಾಣಮುಂಮು..........................................................................
..........................................................................................................

[1ನೇಗರಿಯ 2ನೇಪಾರ್ಶ್ವ]

|| ಸೂತ್ರ || ಎಲ್ಲಿಯುನಾಮಂತ್ರಣದೊ
ಳ್ಪಲ್ಲರ್ ಪ್ರಥಮೈಕ ವಚನಮಂ ಲೋಪಿಸುವ
ರ್ನಿಲ್ಲದೆ ವಿಕಲ್ಪ ಮುಖದಿಂ
ಸೊ ........................................................................ || ೫೨ ||

ಪ್ರಯೋಗಂ : 1)................ನಿನ್ನ ಮಹಿಮೋನ್ನತಿಯಂ ಪೊಗಳಲ್ಕೆ ಶಕ್ಯಮೇ
ಜಲಜಭವೋರಗೇಂದ್ರ ಮುಖವಾದವರಂ ನೆಱೆ ತೆತ್ತದೆಂದು ಸಂ
.......................................................................................... ವ
ತ್ಸಲೆಯೆನುತಾಂ ತೊದಳ್ನುಡಿಗಳಿಂ ನುತಿಪೆಂ ಸರ್ವಮಂಗಲೇ ।

2) ಎತ್ತಣ ಮಾಮರನೆತ್ತಣ ಕೋಗಿಲೆ
ಎತ್ತಣಿಂದೆತ್ತಲ್ಸಂ...............
...................................
ಎತ್ತಣಿಂದೆತ್ತಲ್ಸಂಬಂಧವಯ್ಯಾ
ಗೊಹೇಶ್ವರ ಲಿಂಗಕ್ಕಂ ಎನಗೆಯುಂ
ಎತ್ತಣಿಂದೆತ್ತಲ್ಸಂಬಂಧವಯ್ಯಾ ।

|| ಸೂತ್ರ || ಅವಿಶೇಷದಿಂ................
..................................................
... ........ಂ ಬಿಂದುವಱಿಂ
ದುಸದಾಗಿ ಬಹುವಚನವರ್ನಡದ್ರ್ವುದೆಸರ್ಣಂ || ೫೩ ||

|| ಸೂತ್ರ || ಪಿರಿದುಂ ದ್ವಿತ್ವ ಬಹುತ್ವಂ

ಬರೆಗಳ..................................

..................................

ಪರಿಣತೆ ಮೇಣ್ಗಾಥುಗೇಕವಚನದೊಳತ್ವಂ || ೫೪ ||

ಪ್ರಯೋಗಂ : 1) ಬಹುಳ[ಕ್ಕೆ] :

ವನದೇವತೆಯುರಿರ, ನಂದನದೇವತೆಯುರಿರ
ದೆಶೆಯ ದೇವತೆಯುರಿರ,..... .........ಅನಾಥೆಯುನೆನ್ನಂ|

2) ಮೇಣ್ ಅಯ್ಗೆ :

ಬಾರೇ, ಬಾರೋ, ಬಾರಾ,

3) ಬರೆ ಬಂದ ಬಾಯೆಂಬಾದೇಶಕ್ಕೆ :

ಬಾಯೆನ್ನಾ..................................

4) ಪಿರಿದುಂ ಎಂಬುದರಿಂ ಗಳಾಗಮಕ್ಕೆ ಇರಾಗಮುಮಿಲ್ಲ :

ಜಳಧಿ ದ್ವೀಪಾಂತರಂಗಳನಿರದೆ ಪುಗಿಂ ಪುಗಿಮುಗ್ರಾರಿಗಳ್ |

|| ಸೂತ್ರ || ..................................

..............................ಸಂಬೋಧನದೊ
ಳ್ಪ್ರಭವಿಪ್ಪುದಾ ದ್ವಿತೀಯಾ
ವಿಭಕ್ತಿ ಕರ್ಮದೊಳನಾಕುಳಂ ವರ್ತಿಸುಗುಂ || ೫೫ ||

ಪ್ರಯೋಗಂ : 1) ನಲ್ಲಳೆ ನಿನ್ನ ಕಾಲ್ವಿಡಿದಪೆಂ ತಿಳಿ ಮಾನಮಿದೇಕೆ |

2) ................ಯುಂ ಮೃಗಮುಮಾಮೋದಾ ಸ್ವನಿಃಶ್ವಾಸೆಯುಂ |

3) ತಳಿರೇ ತಾವರೆಯೇ ಮದಾಳಿಕುಳಮೇ ಕರ್ನೈದಿಲೇ
ಮತ್ತ ಕೋಕಿಳಮೇ ಕಂಡಿರೇ ಪಲ್ಲವಾಧ................
............ ತೆಂ ಪಿಕರವ ಪ್ರಖ್ಯಾತೆಯುಂ ಸೀತೆಯುಂ |

4) ಎಲೆ ಸರ್ವೇಶ ನಿನ್ನ ನಿಜಸ್ವರೂಪ 'ಎಂ ತೋಱು.

ಲೋಕಾಂತರಕ್ಕೆ : 1) ಅನ................ತ್ರಿಯ್ಯ ಚಿತ್ರಕ್ಕೆಕ್ಕೆ |

2) ಸೈರಿಸು ಹೃದಯಮೇ, ಮನವೇ ಸೋಲದಿರು ಬಾಲೆಯುರ ಜಾಲಕ್ಕೆ

3) ಜಲಚರವು ಕೇಳು ಮಾಂ..................................

|| ಸೂತ್ರ || ............ ದಿತ ತತ್ಕರ್ಮ ಕ
ರ್ತೃವಿನೀಪ್ಸಿತ ತಮ ಪದಾರ್ಥಮುಮು ನಾಲ್ಕುಂ ಭೇ
ದವನಾಳ್ದಿರ್ಕುಂ ನಿರ್ವ
ರ್ತ್ಯ ವಿಕಾರ್ಯಂ.............................. || ೫೬ ||

|| ಸೂತ್ರ ||......................

..................................................................

ನುಡಿಗುಂ ತೃತೀಯೆ ಪೇಱ

ಲ್ಪಡೆಗುಂ ಸಲೆ .................................. || ೫೭ ||

..................................................................................................

[೩ ನೇ ಗರಿಯ 1ನೇ ಪಾರ್ಶ್ವ]

|| ಪ್ರಯೋಗಂ ||

1) ............... ಸಲ್ಪಟ್ಟುದು |

2) ಶಿವ ನಿನ್ನಿಂ ಪೂಜಿಸಲ್ಪಟ್ಟಂ |

3) ಭಕ್ತರಿಂ ಜಂಗಮರಾರಾಧಿಸಲ್ತಕ್ಕರ್ |

4) ಗೌರಿ ಹಿಮನಂತ...............ಬೆಳುದುದುಗರ್ದ್ದೆ. |

|| ಸೂತ್ರ || ನುತ ಸಂಪ್ರದಾನ ರೂಢಂ

ಚತುರ್ಥಿಯದು ರುಚಿಯೊಳೀರ್ಷೆಯೊಳ್ಕಚ್ಚರದೊಳ್

ಹಿತದೊಳ್ಸಂ ಭೀತಿಯೊಳು

........................................................... || ೫೮ ||

|| ಸೂತ್ರ || ...ತ ಹೇತುವಿನೊಳ್ಸಂ

ದಸನತಿಯೊಳ್ಪ್ರಾಣ್ಯನಾದರ ಸ್ಮರಣದೊಳು

ದ್ಧವಿಸಿದನೀಪ್ಸಿತಕೊಳ್ಸದ್ಧ

ಶವಪೃತ್ತಿಯೊಳ್ಪ್ರತಿ ಸಿಧಾನದೊ........... || ೫೯ ||

||ಅನ್ಯ||ಯಸ್ಮೈ ರೋಚತೇ ದದಾತಿ ವಾ ಸಂಪ್ರದಾನಂ.

ಯಸ್ಮೈ–ಆವಂಗೆ, ರೋಚತೇ–ರುಚಿಯಾದಪುದು. ವಾ-ಮೇಣ್

ದದಾತಿ–ಕೊಟ್ಟಪ, ತತ್–ಅದು, ಪ್ರದಾನಂ–ಸ...........

|| ಪ್ರಯೋಗ ||

...................ಪುತಂಕ್ಷೇಮ ಪ್ರತಿಕುಶಲಂ ಭದ್ರಂ |

ಭವಿತಂ ಭವ್ಯಂ ಶ್ರೇಯಂ |

ಶಿವಂ ಶುಭಂ ಸ್ವಸ್ತಿ ಮಂಗಳಂ ಕಲ್ಯಾಣಂ ||

|| ಸೂತ್ರ || ........................................ ........

...............................................................

ಕಾದಾನೇಷ್ವಾನಿಷ್ವಾ

ಸಾದಿತ ಹೇತುವಿನೊಳುದಯದೊಕ್ರಮದೊಳ್ | || ೬೦ ||

|| ಅನ್ಯ || ಯೆಲೋಪೈತಿ ನಿಭೇತಿವಾದ ಅಪಾದಾನಂ.

ಯ – .........., ವಾ – ಮೇಣ್, ವಿಭೇತಿ–ಅಂಜಿದಪಂ,
ತತ್–ಅದು, ಅಪಾದಾನಂ– ಅಪಾದಾನ ಕಾರಕಮೆನಿಕುಂ.

|| ಸೂತ್ರ || ಪತಿಕುಲಜಾತ್ಯ...............

.........................................

............ ಸಂಬಂಧದೊಳಂ ತ
ದ್ಗತ ಸಂಬಂಧದೊಳವುಂಟು ಷಷ್ಠಿಗೆ ಯೋಗಂ || ೬೧ ||

|| ಅನ್ಯ || ಪರಸನ್ನಿಕರ್ಷಃ ಸಂಬಂಧಃ

ಪರ [ಸನ್ನಿಕರ್ಷಃ] – ಪರನಾಪುಂಗಳ ಕೂಟಂ
ಸಂಬಂಧಃ– ಸಂಬಂಧವೆನಿಕುಂ.

|| ಸೂತ್ರ || ಧೀರರಿನಾವುದು ತಾನಾ
ಧಾರಮದಧಿಕರಣ ಮ.......................

.............................................

...........ಹಾರಕಾಲ ಸತ್ಯರ್ಥಗತಂ || ೬೨ ||

|| ಅನ್ಯ || ಯಾ ಆಧಾರಸ್ತದಧಿಕರಣಂ

ಯಃ – ಆವುದು, ಆಧಾರ – ಆಸ್ಪದಮಸ್ತು, ತತ್–ಅದು

.......................................................................................................

|| ಸೂತ್ರ || ಇಂತೀ ಪೇಳ್ದ ವಿಭಕ್ತಿ ಗ
ಳೆಂತುಂ ಪಲ್ಲಟಿಸುಗುಂ ಯಥೇಷ್ಟಂ ಪ್ರಥಮಾ
ರ್ಥಂ ತೋಱಿಯುಂ ದ್ವಿತೀಯಾ
ರ್ಥಂ ತೋಱಿಯುಮಲ್ಲಿ................ || ೬೩ ||

|| ಸೂತ್ರ || ................................... ತೃತೀ
ಯಾರ್ಥ ಚತುರ್ಥ್ಯರ್ಥದೊಳ್ದ್ವಿತೀಯೆತೃತೀಯೋ
ಕ್ತಾರ್ಥದೊಳಾ ಸಪ್ತಮಿಯೆ ಸ
ರ್ಥಂ ಪಂಚಮಿಯೊಳಂ ತೃತೀಯೆ ಸಮರ್ಥಂ || ೬೪ ||

................

|| ಸೂತ್ರ || ...........ಳಮಾ ಚತುರ್ಥಿ ಸಪ್ತಮಿಯೊಳೆ ಸಂ
ಗತಮಾ ಪ್ರಥಮಾ ಷಷ್ಠಿ
ಚತುರ್ಥಿಗಪ್ರ ಥಮೆಯುಂ ದ್ವಿತೀಯೆ ಯಾ....— || ೬೫ ||

|| ಸೂತ್ರ || ............... ಜಾತಿಯೊಳೇಕ
ತ್ವಕ್ಕೆ ಬಹುತ್ವಂ ಬಹುತ್ವದೆಡೆಗೇಕತ್ವಂ
ಪೊಕ್ಕು ವಿಶೇಷಣಮಕ್ಕುಂ
ಮೊಕ್ಕಳ........................................ || ೬೬ ||

.......................................................................................

[ಎರಡನೇ ಗರಿಯ 2ನೇಪಾರ್ಶ್ವ]

ಪ್ರಯೋಗಂ : 1)...............ಂ | ಹಸ್ತಾಗ್ರೇ ಮಾದೂನ್ವತಿ
ಮಾ ಮಾ ಮುಂಚ ಶರೇತಿ |
ಕೋಪ ವಚನ್ಯೈರಾನರ್ಥಿತ ಭ್ರೂಲತಾ |.................................
........... ಪ್ಯತಂ ಶ್ರಮಯಾ ನುದಿತೋ ಮೂರ್ಧ್ನೈಃ ಸುರೈಃ ಸಾಗರಃ
2)ಅಸುರೇಂದ್ರೋನ್ನತಿ ಖೇಚರೇಂದ್ರ ವಿಭವಂ................
ಲ್ಲಮುದವಮಿವಂ ಬೇಳ್ಪಂತು ಬೆಳ್ಮಾಗೆ ಸಂಚಳವಮಾದುವು.
ಈ ಏಕತ್ವಕ್ಕೆ : ಇವೆಲ್ಲಮುದವಂಗಳ್ ಎಂದು...........................

|| ಸೂತ್ರ || ...............
ನಾಕರಿಸದು ಜಾತಿತಾಂ ವಿಶೇಷಣ ಮುಖದಿಂ
ದಾಕಾರಕಮೇಕತ್ವಮ
ನೇಕತ್ವಮನಾ ಕ್ರಿಯಾಪದಂ ಪಡೆಯಲೊಡಂ || ೬೭ ||

|| ಅನ್ಯ || ಭೇದ್ಯ ವದ್ಭೇದ್ಯ................

||ಸೂತ್ರ || ................
........ಭಾವಂದೇಕತೆ ಬಹುತಾ
ಧೀನಂ ವಿಶೇಷಣಂ ಬಹು
ತಾನ ತಮ ವಿಶೇಷ್ಯ ಮೇಕವಚನಮೆಯಕ್ಕುಂ || ೬೮ ||
ವಿದಿತ ವಿ ...............
................ ನಾಂತು ವಾಕ್ಯದ ಮೊದಲೊಳ್
ಪದವೆತ್ತುವಗ್ರ ಕಾರಕ
ಪದದ ವಿಭಕ್ತಿಯನೆ ತಳೆವುದನ್ವಯ ಮುಖದೊಳ್ || ೬೯ ||

||ಪ್ರಯೋಗ || 1) ............... ಕೈದುವೊತ್ತರ ದೇವಂ | ಗೆಲ್ಗಲ್ ನೃಪತುಂಗ
ಗಾಜಿಕೇರಿದಿರಿಪರೊಡರಾರ್ಧರೆ ತ್ರಿತಳದೊಳ್.
2) ಸಂಗ...................ಉದನಿದಂ
ತಾಂಗಡ ಮೆಱಿಯಿಸನೀ ಪಾ | ರ್ಶ್ವಂಗಡ

ಮೆಯ್ಯೊಳೊಂದು ಮರುಳುಂಟಕ್ಕುಂ.

|| ಸೂತ್ರ || ಕೂಡಿ ನುಡಿವೆ...............

....……………………………………

ನೀಡುಂ ವಾಕ್ಯದ ಕಡೆಯೊ

ಳ್ಕೂಡಿರ್ದುದದಾವುದದುವೆ ಮುಖ್ಯವೆನಿಕ್ಕುಂ || ೭೦ ||

ವ್ಯವಹರಿಸುವಿನಂ ಪ್ರಥಮ್ಯೆ

………………………………………………

………………ಡಿಪೆಡೆಯೊಳ್ ಪುಗಿ

ಸುವರ್‌ಕ್ರಿಯಾನೇಕ ವಚನಮಂ ಮಾರ್ಗವಿದರ್ || ೭೧ ||

|| ಪ್ರಯೋಗಂ || : ಅವತಂಸೋತ್ಪಲ ತಾಡನಂ……………………

……………. ….ಚಾರು ವಾಮ ಚರಣಾಘಾತಂ ಚಳದ್ಭ್ರೂಲತಾ

ಗ್ರವಿಭಾಗೋತ್ಕಟ ತರ್ಜನಂ ತರಳತಾ ತಾಮ್ರಾಧರಂ

…………….ಪ್ರಾರಂಭದೊಳ್ ಕಾಂತೆಯಾ |

|| ಸೂತ್ರ || ಆವನವಳದೆಂಬಿವಿರ್ದಂ

ತೆವೊಲಿರ್ದಪುವಾಮನಾಮಳಾವುದು ತಾನೆಂ

ಬಿವ………………………………………………

………………………………………ವಿದರಿಂ || ೭೨ ||

|| ಪ್ರಯೋಗ || : ಯಂ ಸರ್ವ ಶೈಲಾಃ ಪರಿಕಲ್ಪ್ಯ ವತ್ಸ್ಯಂ

ಮೇರೌ ಸ್ಥಿತೇ ದೋಗ್ಧರಿ ದೋಹದಕ್ಷೇ....



# ಟೀಕೆ ಟಿಪ್ಪಣಿಗಳು

---

## ೧. ಭೀಮನಿಂದ ದುಶ್ಶಾಸನನ ರಕ್ತಪಾನ ?

"ಕರ್ನಾಟಕ ಲೋಚನ", ಜೂನ್ ೧೯೯೫ನೆಯ ಸಂಚಿಕೆಯಲ್ಲಿ ಪ್ರಕಟವಾದ "ಭೀಮನು ದುಃಶಾಸನನ ರಕ್ತವನ್ನು ಕುಡಿದನೆ ?" ಲೇಖ ಪುನರ್ವಿಮರ್ಶೆಗೆ ಎಳಸು ವಂಥದು. ಸಂದರ್ಭ ಹೀಗಿದೆ–ಕುರುಕ್ಷೇತ್ರ ಯುದ್ಧದ ಅನಂತರ ಗಾಂಧಾರಿಗೆ ಸಮಾಧಾನ ಹೇಳಲು ಧರ್ಮ ಭೀಮಾದಿ ಪಾಂಡವರು ಮತ್ತು ಶ್ರೀಕೃಷ್ಣ ಹೋದಾಗ ಗಾಂಧಾರಿ ಭೀಮನಿಗೆ,—ದುಶ್ಶಾಸನನ ವಕ್ಷಸ್ಥಳವನ್ನು ಬಗೆದು ಅವನ ರಕ್ತ ಕುಡಿದು ಅನಾರ್ಯ ಸಿಂದ್ಯ ಕೆಲಸ ಮಾಡಿದೆ ಎಂದು ಆಕ್ಷೇಪಿಸುವಳು. ಆಗ ಭೀಮ, – "ತಾಯಿಯೇ ರಕ್ತ ನನ್ನ ಹಲ್ಲು ತುಟಿಗಳನ್ನು ದಾಟಿ ಒಳಗೆ ಹೋಗಲಿಲ್ಲ ; ಅರ್ಥಾತ್ ನಿಜವಾಗಿ ನಾನು ಕುಡಿಯಲಿಲ್ಲ. ಜೂಜಾಟದ ಸಮಯದಲ್ಲಿ ದ್ರೌಪದಿಯ ಕೂದಲು ಹಿಡಿದೆಳೆದು ಅವಮಾನಿಸಿದಾಗ ಕ್ರೋಧಾವಿಷ್ಟನಾದ ನಾನು, – ನಿನ್ನ ಕೈಗಳನ್ನು ಕಿತ್ತು, ಎದೆಸೀಳಿ, ರಕ್ತ ಕುಡಿಯುತ್ತೇನೆಂದು ಮಾಡಿದ ಪ್ರತಿಜ್ಞೆಯನ್ನು ಇಷ್ಟು ಮಾತ್ರ ಮಾಡಿ ಪೂರೈಸಿ ಕೊಂಡಿರುವೆನು. ಪ್ರತಿಜ್ಞಾ ಪಾಲನೆ ಕ್ಷತ್ರಿಯನಿಗೆ ಅನಿವಾರ್ಯ ಕರ್ತವ್ಯ. ಪ್ರಾರಂಭ ದಲ್ಲಿಯೇ ನಿನ್ನ ಮಕ್ಕಳನ್ನು ತಿದ್ದಿ ತಡೆಯದಿದ್ದ ನೀನು ಈಗ ನನ್ನ ಮೇಲೆ ತಪ್ಪು ಹೊರಿಸುವುದು ಸರಿಯಲ್ಲ" ಎಂದು ಅವಳ ದೋಷವನ್ನು ಎತ್ತಿ ತೋರಿಸಿರುವನು.

ಭೀಮನ ಈ ಆತ್ಮಸಮರ್ಥನೆ ಗಾಂಧಾರಿಯನ್ನು ಸಾಂತ್ವನಗೊಳಿಸುವ ಬದಲು ತನ್ನೆಲ್ಲ ಮಕ್ಕಳ ಮರಣದಿಂದ ಸುಟ್ಟುಸುಣ್ಣದಂತಾದ ಅವಳನ್ನು ಮತ್ತಷ್ಟು ನೋಯಿಸು ವಂಥದು. ಜೊತೆಗಿದ್ದ ಶ್ರೀಕೃಷ್ಣ ಒಂದು ಶಬ್ದ ಸಹ ನುಡಿಯುವುದಿಲ್ಲ. ಬಹುಶಃ ದುರ್ಯೋಧನನ ವಧೆಯಲ್ಲಿ ಆತನ ಕೈವಾಡವಿದ್ದಿತೆಂಬುದು ಗಾಂಧಾರಿಗೂ ಗೊತ್ತಿದ್ದ ರಿಂದ ಮೌನವೇ ಲೇಸೆಂದು ಆತ ಬಗೆದಂತಿದೆ. ಅಲ್ಲದೆ ದುಶ್ಶಾಸನ ವಧೆಯ ಸಮಯದಲ್ಲಿ ಉಪಸ್ಥಿತರಿದ್ದವರಲ್ಲಿ ಕರ್ಣ, ದುರ್ಯೋಧನ, ಶಲ್ಯ, ಕೃಪ ನಾಲ್ವರೆ ಪ್ರಮುಖರು. ಅರ್ಜುನ ಶ್ರೀಕೃಷ್ಣ ಬೇರೊಂದೆಡೆ ಯುದ್ಧದಲ್ಲಿ ತೊಡಗಿದ್ದರು. ಶತ್ರುಪಕ್ಷಕ್ಕೆ ಸೇರಿದವ ನಿದ್ದರೂ ಭೀಮ ತನ್ನ ಆತ್ಮ ಸಮರ್ಥನೆಯಲ್ಲಿ ಕರ್ಣನ (ವೈವಸ್ವತ) ಸಾಕ್ಷಿಯನ್ನೂ ಕೊಟ್ಟಿರುವದು ಆಗ ಆತ ಜೀವಿಸಿದ್ದಿಲ್ಲವಾದರೂ, ಗಮನಾರ್ಹವಿದೆ. ಅವನ ಉದಾತ್ತ, ಅಸಾಮಾನ್ಯ ವ್ಯಕ್ತಿತ್ವದ ಮೇಲೆ ಹೆಚ್ಚು ಪ್ರಕಾಶ ಬೀರುವಂತಿದೆ.

ಭೀಮನ ಪ್ರತಿಜ್ಞೆ ಮತ್ತು ಆತ ನಿರ್ವಹಿಸಿದ ರೀತಿ ಪ್ರಾರಂಭದಿಂದ ಕೊನೆವರೆಗೆ ಜನಜನಿತವಾಗಿವೆ. ಕ್ರೋಧೋನ್ಮತ್ತನಾದ ಭೀಮ ದುಶ್ಯಾಸನನ ರಕ್ತವನ್ನು ತನ್ನ ಮುಖ ಮೋರೆ, ಬಾಯಿ, ಹಲ್ಲು, ತುಟಿಗಳಿಗೆ ಮೇಲಿಂದ ಮೇಲೆ ಸವರಿಕೊಳ್ಳುತ್ತ ಕುಡಿಯುವವರಂತೆ ಮಾಡಿರುವನು. ಸುತ್ತಲೂ ಈಡಾಡಿರುವನು, ಕುಣಿದಾಡಿರುವನು. ಚೀರಾಡಿರುವನು, ಸಾಲದ್ದಕ್ಕೆ ಬಗೆಬಗೆಯಿಂದ ಅದರ ರುಚಿಯನ್ನು ಬಣ್ಣಿಸಿರುವನು. ಇವೆಲ್ಲ ಕೃತಿಗಳು ಆತ ದುಶ್ಯಾಸನನ ರಕ್ತವನ್ನು ಕುಡಿದಿರಬೇಕೆನ್ನುವತ್ತ ಬೆರಳು ನೀಡುತ್ತಿವೆ. "ಲೋಚನ"ದಲ್ಲಿಯ ಪ್ರಸ್ತುತ ಲೇಖವಾದರೂ ಹೀಗೆಯೇ ವಾಲಿದೆ.

ಒಂದೊ, ಆತ ಗಾಂಧಾರಿ ಎದುರು ಸುಳ್ಳು ಹೇಳಿರಬೇಕು, ಇಲ್ಲವೆ ತನ್ನ ಪ್ರತಿಜ್ಞೆಯನ್ನು ಅಕ್ಷರಶಃ ಪಾಲಿಸಿದನೆಂಬುದು ನೋಡುವವರಿಗೆ ಹೆಚ್ಚು ಮನದಟ್ಟಾಗಲೆಂದು ಅದರ ರುಚಿಯನ್ನು ಸಹ ಬಣ್ಣಿಸಿರಬೇಕು. ಆದರೂ ಲೋಕವೆಲ್ಲ (ಬಹುಶಃ ಕರ್ಣ ಒಬ್ಬನನ್ನು ಬಿಟ್ಟು ?) ಆತ ದುಶ್ಯಾಸನನ ರಕ್ತವನ್ನು ಮನವಾರೆ ಕುಡಿದನೆಂದು ನಂಬಿದೆ. ಅವನ ಆತ್ಮಸಮರ್ಥನೆಯನ್ನು ಕುಂಟು ಸಮರ್ಥನೆಯನ್ನಾಗಿಸಿದೆ.

## ಆಚಾರ್ಯ ಮಧ್ವರ ಅಭಿಪ್ರಾಯ

ಲಭ್ಯವಿದ್ದ ಮಹಾಭಾರತದ ಪ್ರತಿಗಳನ್ನು ಕಲೆಹಾಕಿ, ಪ್ರಕ್ಷಿಪ್ತ ಮತ್ತು ವಿಸಂಗತ ಭಾಗಗಳನ್ನು ತ್ಯಜಿಸಿ, ಶಾಸ್ತ್ರ ಪುರಾಣಗಳ ನೆರವಿನಿಂದ ಸರಿಯಾದ ಪಾಠಗಳನ್ನು ಗುರುತಿಸಿ ಪ್ರಚಲಿತ ಸಂಶೋಧನ ಪದ್ಧತಿಗೆ ಶ್ರೀಕಾರ ಹಾಕಿದ ಆಚಾರ್ಯ ಶ್ರೀಮಧ್ವರ ತಮ್ಮ ಮೇರುಕೃತಿ, "ಮಹಾಭಾರತ ತಾತ್ಪರ್ಯ ನಿರ್ಣಯ"ದಲ್ಲಿ ಭೀಮನ ಆತ್ಮ ಸಮರ್ಥನೆಯನ್ನು ಎತ್ತಿ ಹಿಡಿದಿರುವರು. ತನ್ನ ಪ್ರತಿಜ್ಞೆಯನ್ನು ಅಕ್ಷರಶಃ ಪಾಲಿಸಿದನೆಂಬುದು ಸರ್ವತ್ರ ಪ್ರಸರಿಸಲೆಂದು ಭೀಮ ಸ್ವಯಂ ಭಗವಾನ್ ಶ್ರೀವಿಷ್ಣುವಿನ ನರಸಿಂಹಾವತಾರ ಸದೃಶ ಭಯಾನಕ ಸನ್ನಿವೇಶವನ್ನು ಪುನರಾವೃತ್ತಗೊಳಿಸಿರುವನು. ರಕ್ತಪಾನ ತೋರಿಕೆಗೆ ಮಾತ್ರ ಎಂದಿರುವರು. ಹದಿಮೂರು ವರ್ಷಗಳಿಂದ ಹತ್ತಿಕ್ಕಿಕೊಂಡು ಬಂದ ಕ್ರೋಧ ಪ್ರತಿಕಾರ ಭಾವಗಳು ನರಸಿಂಹಾವತಾರದಂತೆ ಭುಗಿಲ್ಲೆಂದು ಮೂಡಿಬಿದ್ದಿರುವುದು ಸಹಜ ಮತ್ತು ಸ್ವಾಭಾವಿಕ. ಕನ್ನಡದಲ್ಲಿ ಆದ್ಯ ಹರಿದಾಸರೆಂದು ಗಣಿಸಲ್ಪಟ್ಟ ಶ್ರೀಪಾದರಾಯರು ಈ ಸನ್ನಿವೇಶವನ್ನು "ವೀರನರಹರಿಯ ಲೀಲೆಯ ತೋರಿದ" ಎಂದು ಬಣ್ಣಿಸುವರು. ಶ್ರೀವಾದಿರಾಜರು "ಕಡು ತೃಷೆಗೆ ದುಶ್ಯಾಸನ ನೊಡಲು ಬಗಿದು ರಕ್ತ ಕುಡಿದಂತೆ – ತೋರ್ದ ನಿರ್ಮ್ಮಡೆಯ ದ್ರೌಪದಿಯ ಪ್ರಿಯ" ಎಂದು ಕೀರ್ತಿಸಿರುವರು. ದುಶ್ಯಾಸನನ ರಕ್ತವನ್ನು ಕುಡಿದನೆಂಬ ಲೋಕ ಪ್ರಸಿದ್ಧಿಯು ಏನದು ಆಚಾರ್ಯ ಮಧ್ವರಾಗಲಿ ಅವರ ಶಿಷ್ಯಂದಿರಾದ ಶ್ರೀ ಪಾದರಾಯ ವಾದಿರಾಜರಾಗಲಿ ಮತಾಭಿಮಾನಕ್ಕೆ ಕಟ್ಟು ಬಿದ್ದು ಭೀಮನ ಆತ್ಮ ಸಮರ್ಥನೆಯನ್ನು ಎತ್ತಿ ಹಿಡಿದಿರುವರೇ? ಎಂಬ ಅನುಮಾನಕ್ಕೆ ಎಡೆಮಾಡಿಕೊಡುತ್ತದೆ.

ವೇಣೀಸಂಹಾರ ಸಂಸ್ಕೃತ ನಾಟಕದ ಕರ್ತೃ ಭಟ್ಟನಾರಾಯಣ (ಕ್ರಿ.೬-೭-ಶ.) ತನ್ನದೇ ಆದ ಯುಕ್ತಿಯೊಂದನ್ನು ಮಂಡಿಸಿರುವನು. ಅದರಲ್ಲಿ ಭೀಮನ ಪತ್ನಿ ಹಿಡಿಂಬೆ ಮುಂಜಾಗ್ರತೆ ವಹಿಸಿ ರುಧಿರಪ್ರಿಯನೆಂಬ ರಣರಕ್ಕಸನನ್ನು ಸೂಕ್ಷ್ಮ ರೂಪದಲ್ಲಿ ಭೀಮನ ಗಂಟಲದಲ್ಲಿ ಕುಳಿತು, ಅದು ಒಳಗಿಳಿಯದಂತೆ ನೀನೇ ಕುಡಿಯೆಂದು ಅಟ್ಟುವಳು. ಯುಕ್ತಿಯೇನೊ ಆಕರ್ಷಕವಿದೆ. ಆದರೆ ಮೂಲಭಾರತದಲ್ಲಿನ ಸ್ವಯಂ ಭೀಮನ ಆತ್ಮ ಸಮರ್ಥನೆಗೆ ಧಕ್ಕೆ ತಗಲುವುದರಿಂದ ಗ್ರಹಿಸುವಂತಿಲ್ಲ.

ಸ್ವಭಾವದಿಂದ ಒರಟ, ಕೋಪಿಷ್ಠ ಎಂಬುದನ್ನು ಬಿಟ್ಟರೆ ಭೀಮ ದೇವಾಂಶ, ಉದಾತ್ತ ಚರಿತನೆಂಬಲ್ಲಿ ಎರಡು ಅಭಿಪ್ರಾಯಗಳಿಲ್ಲ. ಯುದ್ಧದ ಮೊದಲು ಸಂಧಾನಕ್ಕೆಂದು ಶ್ರೀಕೃಷ್ಣ ಕೌರವರೆಡೆ ತೆರಳುವ ಮುನ್ನ ದುಶ್ಶಾಸನ ದುರ್ಯೋಧನರ ವಧೆಗಾಗಿ ಮಾಡಿದ ತನ್ನ ಪ್ರತಿಜ್ಞೆಗಳನ್ನು ಬದಿಗಿರಿಸಿ, ಏನಾದರೂ ಮಾಡಿ, ಸಂಧಾನ ಮಾಡಿಕೊಂಡು ಬಾ, ಕುಲಕ್ಷಯ ತಪ್ಪಿಸು ಎಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವನು. ದ್ರೌಪದಿ ತನ್ನ ಬಿಚ್ಚಿದ ಕೂದಲುಗಳನ್ನು ಮರಳಿ ಬಾಚಿಕೊಳ್ಳುವಂತೆ ಮಾಡೆಂದು ಕಣ್ಣೀರು ತಂದು ಬೇಡಿಕೊಳ್ಳುವಳು. ಶ್ರೀಕೃಷ್ಣ ಭೀಮನಿಗೆ – ಯುದ್ಧದಲ್ಲಿ 'ನಿನ್ನದೇ ಪ್ರಧಾನಾಂಗ', ನೀನೇ ಹೀಗೆ ಮಾಡಿದರೆ ಹೇಗೆ? ಎಂದು ಅವನನ್ನು ಬಡಿದೆಬ್ಬಿಸಬೇಕಾಗುವದು. ಅಜ್ಞಾತವಾಸದಲ್ಲಿರುವಾಗ ಗುರುತು ಸಿಗುವಂಥ ಯಾವುದೆ ಕಾರ್ಯಮಾಡಬೇಡಿರೆಂಬ ಅಣ್ಣ ಧರ್ಮರಾಜನ ಆಣತಿಯನ್ನು ಮೀರಿ ಜರಾಸಂಧನ ಸರಿಸಮಾನನಿದ್ದ ಕೀಚಕನನ್ನು ವಧಿಸಿ ದ್ರೌಪದಿಯ ಮಾನವನ್ನು ರಕ್ಷಿಸಿರುವನು. ಇನ್ನೂ ಕೆಲವು ಉದಾಹರಣೆಗಳನ್ನು ಕೊಡಬಹುದು. ಇಂತಹ ಭೀಮನಿಗೆ ಮಾನವ ಆದರಲ್ಲೂ ಸ್ವಬಾಂಧವನ ರಕ್ತವನ್ನು ಕುಡಿಯುವದು ನಿಂದ್ಯ, ಕಾಡು ಜನರ ಕೆಲಸ ಎಂಬುದು ಗೊತ್ತಿರಲಿಲ್ಲ ಎಂದು ಬಗೆಯುವದು ತಪ್ಪಾದೀತು. ಕೋಪಾವಿಷ್ಟರಾದಾಗ ಹಿಂದು ಮುಂದು ನೋಡದೆ ಏನಾದರೊಂದು ಪ್ರತಿಜ್ಞೆ ಮಾಡುವದು ಅಪರಿಚಿತ ವಿಷಯವೇನಲ್ಲ. ಹಿಂದಿನಿಂದ ಅಂಥ ಕೆಲಸ ನಿಂದ್ಯವೆಂಬ ವಿವೇಕ ಉದಿಸಿದಾಗ ಪ್ರತಿಜ್ಞಾ ಭಂಗದ ದೋಷ ತಗುಲಬಾರದೆಂದು ಏನಾದರೊಂದು ನಿಮಿತ್ತ ಯೋಜಿಸಿ ಪ್ರತಿಜ್ಞೆಯನ್ನು ನಿರ್ವಹಿಸಿದಂತಾಯಿತೆಂಬ ಸಮಾಧಾನವನ್ನು ತಂದುಕೊಳ್ಳುವದಾದರೂ ಅರಿಯದ ವಿಷಯವೇನಲ್ಲ. ಉದಾಹರಣೆಗಾಗಿ ಅರ್ಜುನ ತನ್ನ ಗಾಂಡೀವವನ್ನು ನಿಂದಿಸಿದವರನ್ನು ಕೊಲ್ಲುವೆನೆಂಬ ಪ್ರತಿಜ್ಞೆ ಮಾಡಿದ್ದನು. ಸ್ವಲ್ಪ ಮೊದಲು ಯುದ್ಧದಲ್ಲಿ ಕರ್ಣನಿಂದ ಗಾಯಗೊಂಡ ಧರ್ಮ ನರಳುತ್ತಾ ಮಲಗಿರುವಾಗ ಸಂಶಪ್ತಕರನ್ನು ಗೆದ್ದು ಅರ್ಜುನ ಶ್ರೀಕೃಷ್ಣ ಅವನನ್ನು ಕಾಣಲು ಅಲ್ಲಿಗೆ ಬರುವರು. ನೋವಿನಿಂದ ಗಾಸಿಯಾದ ಧರ್ಮ, ಕರ್ಣನ ಪರಾಕ್ರಮವನ್ನು ಹೊಗಳುವದರೊಂದಿಗೆ ಅರ್ಜುನನ ಗಾಂಡೀವವನ್ನು ಹೀಗಳೆಯುವನು. ಅರ್ಜುನ ತನ್ನ ಪ್ರತಿಜ್ಞೆಯ ಮೇರೆಗೆ, ಪೂಜ್ಯ ಖಾಸ ಅಣ್ಣ ಎಂಬುದನ್ನು ಲೆಕ್ಕಿಸದೆ ಧರ್ಮನನ್ನು ವಧಿಸಲು ಕೈ ಎತ್ತುವನು. ಆಗ

ಶ್ರೀಕೃಷ್ಣ ನಡುವೆ ಬಿದ್ದು ಸಮಯ, ಪಾತ್ರಾಪಾತ್ರ ಮೊದಲಾದ ಸಂಗತಿಗಳನ್ನು ಗಮನಿಸಿ ಪ್ರತಿಜ್ಞೆಯನ್ನು ನಿರ್ವಹಿಸಬೇಕೆಂಬ ನೀತಿಯನ್ನು ಹೇಳಿ ದುರಂತವನ್ನು ತಪ್ಪಿಸುವನು. ಅಣ್ಣನ ಮೇಲೆ ಕೈ ಮಾಡಿದ ಅರ್ಜುನ, ಪಶ್ಚಾತ್ತಾಪದಿಂದ ಪ್ರಾಯ-ಶ್ಚಿತ್ತವೆಂದು ಆತ್ಮ ತ್ಯಾಗಕ್ಕೆ ಸಿದ್ಧನಾಗುವನು. ಆಗ ಶ್ರೀಕೃಷ್ಣ, ಅಷ್ಟೊಂದು ದುಡುಕುವ ಅಗತ್ಯವೇನಿಲ್ಲ. ತನ್ನ ಹೆಗ್ಗಳಿಕೆಗಳನ್ನು ತಾನೇ ಪುನಃ ಹೊಗಳಿಕೊಂಡರೆ ದೋಷ ಹೋಗುವದೆಂದು ಸಲಹೆ ನೀಡುವನು. ಹಾಗೆ ಮಾಡಿ ಅರ್ಜುನ ಸಮಾಧಾನ ತಂದುಕೊಳ್ಳುವನು. ಆಕಲ್ಪಿತವಾಗಿ ಉದ್ಭವಿಸಿದ ದುರಂತಾಚ್ಛಾದಿತ ಬಿರುಗಾಳಿ ಶಾಂತ ನಾಗುವುದು. ಭೀಮನ ದುಶ್ಶಾಸನ ರಕ್ತಪಾನ ಪ್ರತಿಜ್ಞೆ ಈ ವರ್ಗಕ್ಕೆ ಸೇರುವಂಥದು.

## ನಿಶ್ಚಿತ ಆಧಾರ

ಭೀಮನಿಂದ ದುಶ್ಶಾಸನನ ರಕ್ತದ ರುಚಿ ಬಣ್ಣನೆ ಆತ ಅದನ್ನು ಕುಡಿದಿರಬೇಕೆಂಬುದಕ್ಕೆ ಬಲವತ್ತರ ಆಧಾರವಿದ್ದರೂ ನಿಶ್ಚಿತ ಆಧಾರವಾಗದು. ಅರಿತೊ ಅರಿಯದೆಯೊ ಉನ್ಮತ್ತಾವಸ್ಥೆಯಲ್ಲಿದ್ದ ಭೀಮನ ಹಲ್ಲು ತುಟಿಗಳನ್ನು ಮೀರಿ ದುಶ್ಶಾಸನನ ರಕ್ತವು ಒಸರಿರಬೇಕೆಂದು ಬಗೆದರೂ ಕುಡಿದನೆನ್ನಲು ಇಷ್ಟು ಸಾಲದು. ನಾಲಗೆ ಕೇವಲ ರಸನೇಂದ್ರಿಯ. ರುಚಿಬಣ್ಣನೆಗೆ ಇಷ್ಟು ಸಾಕು. ಇಂದು ಸಹ 'ಟೀ' ಕಾರಖಾನೆಗಳಲ್ಲಿ ಬೇರೆ ಬೇರೆ 'ಟೀ' ಎಲೆ ಮಿಶ್ರಣಗಳ ಶುದ್ಧ ಕಷಾಯದ ರುಚಿ ನೋಡಲು 'ಟೀ ಸ್ಟರ' ಎಂಬ ನೌಕರರಿರುವರು. ನಾಲಗೆಗೆ ಮುಟ್ಟಿಸಿ ರುಚಿ ನೋಡಿ ಇಚ್ಛಿತ ಬೇಕುಬೇಡಗಳನ್ನು ಸೂಚಿಸುವದಿಷ್ಟೇ ಅವರ ಕೆಲಸ ; ಕುಡಿಯುವದಿಲ್ಲ. ಅದು ಅಗತ್ಯವೂ ಇಲ್ಲ. ರುಚಿಕಟ್ಟಾಗಿಯೂ ಇರುವುದಿಲ್ಲ, ಕುಡಿದನೆನ್ನಲು ಅದು ನಾಲಗೆಯನ್ನು ದಾಟಿ ಗಂಟಲದಿಂದ ಕೆಳಗಿಳಿಯಬೇಕು. ಇದಕ್ಕೆ ಕನ್ನಡದಲ್ಲಿ ಗಟ್ಟಿ ಪದಾರ್ಥವಿದ್ದರೆ 'ನುಂಗು', ಪ್ರವಾಹಿ ಪದಾರ್ಥವಿದ್ದರೆ, 'ಗುಟುಕರಿಸು' ಎಂಬ ಪ್ರತ್ಯೇಕ ಶಬ್ದಗಳಿವೆ. ಸಂಸ್ಕೃತದಲ್ಲಿ ಇವುಗಳಿಗೆ ಸಮಾನಾರ್ಥಕ ಶಬ್ದಗಳೇನಿವೆಯೊ ಗೊತ್ತಿಲ್ಲ. ಭೀಮನ ರುಚಿ-ಬಣ್ಣನೆಯಲ್ಲಿ ಇಂಥ ಶಬ್ದಗಳ ಪ್ರಯೋಗವಿಲ್ಲ. "ಆಸ್ವಾದ್ಯ ಆಸ್ವಾದ್ಯಂತ ವೀಕ್ಷಮಾಣಃ" ಎಂದು ಆತನ ಬಣ್ಣನೆ ತೊಡಗುತ್ತದೆ. ಇನ್ನೊಂದೆಡೆ 'ಪಿಬಾಮಿ' ಶಬ್ದದ ಪ್ರಯೋಗವಿದ್ದರೂ ಅದು ಭವಿಷ್ಯತ್‌ಕಾಲ ಪ್ರಯೋಗವಿದ್ದು ಆಗ ದುಶ್ಶಾಸನ ಇನ್ನೂ ಜೀವಂತನಿದ್ದನು.

ಶ್ರೀಮದ್ ಭಾಗವತದಲ್ಲಿ ಈ ವಾದಕ್ಕೆ ಹೊಂದುವಂಥ ಒಂದು ಉದಾಹರಣೆಯೂ ಇದೆ. ಸಮುದ್ರ ಮಂಥನ ಸಮಯದಲ್ಲಿ ವಿಷ್ಣು ಮೋಹಿನಿ ಅವತಾರ ತಾಳಿ ದೇವ ದೈತ್ಯರಿಗೆ ಅಮೃತ ಬಡಿಸುವಾಗ ಸ್ವರ್ಭಾನು ಎಂಬ ದೈತ್ಯನು ರೂಪ ಬದಲಿಸಿ ದೇವತೆಗಳ ಸಾಲಿನಲ್ಲಿ ಕುಳಿತಿದ್ದನು. ಆವನ ಎಡಬಲಗಳಲ್ಲಿ ಕುಳಿತಿದ್ದ ಸೂರ್ಯ ಚಂದ್ರರು ಆದನ್ನು ಗುರುತಿಸಿ ವಿಷ್ಣುವಿನ (ಮೋಹಿನಿ) ಗಮನಕ್ಕೆ ತಂದರು. ತತ್‌ಕ್ಷಣ ವಿಷ್ಣು ತನ್ನ ಚಕ್ರದಿಂದ ಆವನ ಶಿರಚ್ಛೇದ ಮಾಡಿದನು. ಆದರೆ ಅಷ್ಟೊತ್ತಿಗೆ ಅಮೃತವು ಸ್ವರ್ಭಾನುವಿನ

ನಾಲಗೆಯನ್ನು ದಾಟಿ ಗಂಟಲಿನಲ್ಲಿ ಇಳಿಯುವದರಲ್ಲಿತ್ತು. ಗಂಟಲದ ವರೆಗೆ ಅಮೃತ ತಗಲಿದ್ದರಿಂದ ಸ್ವರ್ಭಾನುವಿನ ಶಿರ ಅಮರವಾಯಿತು. ಮುಂದೆ ಅವೇ ಅಂದರೆ ಶಿರಮತ್ತುದಡ ರಾಹುಕೇತು ಎಂದು ಪ್ರಸಿದ್ಧವಾಗಿ ಗ್ರಹ ಮಾಲಿಕೆಯಲ್ಲಿ ಸೇರಿಕೊಂಡು ಗ್ರಹಣಕಾಲದಲ್ಲಿ ಸೂರ್ಯ ಚಂದ್ರರನ್ನು ಬಾಧಿಸತೊಡಗಿದವು. (ಸ್ಕಂದ -೮: ೯೨೫-೨೬).

ಭೀಮನ ಆದ್ಯಂತ ಚಾರಿತ್ರ್ಯ ಮತ್ತು ಮೇಲ್ಕಾಣಿಸಿದ ಉದಾಹರಣೆಗಳ ಹಿನ್ನೆಲೆಯಲ್ಲಿ ವಿಮರ್ಶಿಸಿದಾಗ ವಿಸಂಗತವೆನಿಸುವ ಆತನ ಆತ್ಮ ಸಮರ್ಥನೆ ಸುಸಂಗತವೆನಿಸದಿರದು. ಉನ್ಮತ್ತಾವಸ್ಥೆಯಲ್ಲಿದ್ದರೂ ತಲೆಮಾರುಗಳಿಂದ ಹರಿದು ಬಂದು ರಕ್ತಗತವಾದ ಸಂಸ್ಕೃತಿ ಸಂಸ್ಕಾರಗಳ ಪ್ರಭಾವದಿಂದ ದುಶ್ಯಾಸನನ ರಕ್ತವನ್ನು ಹಲ್ಲು ತುಟಿಗಳಿಗೆ ಸವರಿಕೊಳ್ಳುತ್ತ ಕುಡಿದಂತೆ ಮಾಡಿ ನನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡೆನು, ನಿಜವಾಗಿ ಕುಡಿಯಲಿಲ್ಲೆಂಬ ಭೀಮನ ಆತ್ಮಸಮರ್ಥನೆ ಹುರುಳಿಲ್ಲದ ಸಮರ್ಥನೆ ಎನ್ನುವಂತಿಲ್ಲ. ಭೀಮ ದುಶ್ಯಾಸನನ ರಕ್ತವನ್ನು ನಿಜವಾಗಿ ಕುಡಿಯಲಿಲ್ಲ, ಕುಡಿದಂತೆ ತೋರಿಸಿದನು ಎಂಬ ಆಚಾರ್ಯ ಮಧ್ವರ ಮತ್ತು ಅವರ ಶಿಷ್ಯಂದಿರ ಅಭಿಪ್ರಾಯವಾದರೂ ಮತಾಭಿಮಾನ ಎನ್ನುವಂತಿಲ್ಲ. ●

—ಭೀಮರಾವ್ ಚಿಟಗುಪ್ಪಿ

## ೨. ಛಂದೋ ವಿಚಾರ-ಒಂದು ಟಿಪ್ಪಣಿ

ಕರ್ನಾಟಕ ಲೋಚನ (ಡಿಸೆಂಬರ್ ೧೯೯೫) ಸಂಚಿಕೆಯಲ್ಲಿ "ಛಂದಸ್ಸಿನ ಅಧ್ಯತೆ ಹಾಗೂ ನವವೃತ್ತಗಳ ಆವಿಷ್ಕರಣ" ಎಂಬ ಲೇಖನದ ಮೂಲಕ ಕುಮಾರ ನಿಜಗುಣ ಸ್ವಾಮಿಗಳು ಛಂದಸ್ಸಿನಲ್ಲಿ ತಮ್ಮ ಸಂಶೋಧನೆಗಳನ್ನು ಓದುಗರ ಮುಂದಿಟ್ಟಿದ್ದಾರೆ. ಅವನ್ನು ಪರಿಶೀಲಿಸಿದ ಕಾವ್ಯಲಕ್ಷಣಾಭಿಮಾನಿಗಳ ನಿರ್ಮಲ ಮನಸ್ಸಿಗೆ ಹೊಳೆಯಬಹುದಾದ ಅಂಶಗಳಿವು:–

ಈಗೀಗ ಛಂದೋಲ್ಲಂಘನೆಯೆಂಬ ಕಾವ್ಯದೋಷವನ್ನೆ ಕಾವ್ಯಗುಣವೆಂಬ ಎಣಿಕೆಯ ಮುಸುಕಿನಲ್ಲಿ, ತಮ್ಮದೇ ಎಂದುಕೊಂಡ ನವೀನ ಅನ್ವೇಷಣೆಯ ಸೋಗಿನಲ್ಲಿ ಮತ್ತು ಪರಾನುಕರಣೆಯ ಗುಂಗಿನಲ್ಲಿ ಮುಳುಗಿ ದೆಸೆಗಾಣದವರೇ ಬಹುಮಂದಿ. ಅಂಥವರು ಕನ್ನಡ ಪದ್ಯರಚನೆಗೆ ಜಾಯಮಾನವಾದ ದ್ವಿತೀಯಾಕ್ಷರ ಪ್ರಾಸವನ್ನೂ ಛಂದಶ್ಶಾಸ್ತ್ರದ ಅನುಸರಣೆಯನ್ನೂ ಸಂಪೂರ್ಣವಾಗಿ ಧಿಕ್ಕರಿಸುತ್ತಾರೆ. ಅದರೂ, ಛಂದೋಲ್ಲಂಘನೆ ಮಾಡಿದೆವೆಂಬುವನ್ನೊಪ್ಪದೆ, ತಮ್ಮ ರಚನೆಗೆ ಎಲ್ಲಿಲ್ಲದೊಂದು ಹೆಸರಿಟ್ಟು ಸ್ವತಃ ಹಿಗ್ಗಿ

ಕೊಂಡು ತಮ್ಮ ಕಿರಿಯ ಬಡಪಾಯಿಗಳೂ ಅದನ್ನೆ ಮೆಚ್ಚಿ ಹಿಗ್ಗುವಂತೆ ಮಾಡುತ್ತಾರೆ. ಈ ವಸ್ತುಸ್ಥಿತಿಯನ್ನು ದೃಷ್ಟಾಂತದಿಂದ ಹೇಳುವುದಾದರೆ-ಮರುಭೂಮಿಯ ಮೃಗ ಜಲವನ್ನೆ ಜಲಾಶಯವೆಂದುಕೊಂಡಂತೆ, ಎನ್ನಬಹುದು. ಅಂತಹ ಮರುಧರೆಯ ನೀರಸ ನಿಸ್ಸಸ್ಯ ವಿಸ್ತಾರದಲ್ಲಿಯೂ ಕೆಲವೆಡೆ ಜಲ ಮತ್ತು ಸಸ್ಯಗಳಿರುವ "ಓಯೆಸೀಸ್" ಸ್ಥಳಗಳಿರುವುದೂ ನಿಜ. ಹಾಗೆಯೇ ಛಂದೋನುಸರಣೆಯನ್ನು ಹೇಯವಾಗಿ ಪರಿಗಣಿಸುವ ಪಂಡಿತಂಮನ್ಯ ಜನಾಧಿಕ್ಯದೆಡೆಯಲ್ಲಿಯೂ ಅಂಥವರ (ಅ)ವಿಚಾರವಾದವನ್ನು ಬದಿಗಿಕ್ಕಿ – ಪೂರ್ವಕವಿ ಪ್ರೇರಣೆಯಿಂದ, ವ್ಯುತ್ಪತ್ತಿ ಪ್ರತಿಭೆಗಳಿಂದ ಕವನ-ಕಾವ್ಯ ರಚನೆ ಮಾಡತಕ್ಕವರೂ ಅಲ್ಲಲ್ಲಿ ಇರುವುದೂ ನಿಜ. ಇದೊಂದು ಶುಭಲಕ್ಷಣ, ರುಚಿ ಚಕ್ರದ ಪರಿವರ್ತನೆಯ ಲಕ್ಷಣ.

ಇದರೊಂದಿಗೆ ಛಂದಸ್ಸಿನಲ್ಲಿ ಲಾಕ್ಷಣಿಕ ನವಚಿಂತನೆಗಳೂ ಮೂಡುತ್ತಿರುವ ಚಿಹ್ನೆಯಾಗಿ ನಾವು ಶ್ರೀಕುಮಾರ ನಿಜಗುಣರ ಛಂದಸ್ಸಾಧನೆಗಳನ್ನು ಪರಿಗಣಿಸಬಹುದು ಮತ್ತು ಅಭಿಮಾನಪಡಬಹುದು. ಪ್ರಾಚೀನ ಲಾಕ್ಷಣಿಕರು ವರ್ಣಚ್ಛಂದಸ್ಸನ್ನು ಉಕ್ತೆಯಿಂದ ಉತ್ಕೃತಿಯ ವರೆಗೆ-ಅಂದರೆ, ಒಂದಕ್ಷರದ ಪಾದದಿಂದ ತೊಡಗಿ, ಇಪ್ಪತ್ತಾರು ಅಕ್ಷರಗಳ ವರೆಗೆ ಒಂದೊಂದು ಪಾದದಲ್ಲಿರುವ ಸಮವೃತ್ತಗಳ ಲಕ್ಷ್ಯಲಕ್ಷಣಗಳನ್ನು ತಿಳಿಸಿದ್ದಾರೆ. ಅವುಗಳಿಂದಲೂ ಹೆಚ್ಚಿನವನ್ನು ಮಾಲಾವೃತ್ತಗಳು ಅಥವಾ ದಂಡಕಗಳೆಂದು ಪ್ರಸ್ತಾವಿಸಿದ್ದಾರೆ. ಮಾನ್ಯ ಶ್ರೀ ಕುಮಾರ ನಿಜಗುಣರು ಇನ್ನೂ ಮುಂದುವರಿದು ಇಪ್ಪತ್ತೇಳರಿಂದ ಮೂವತ್ತ ರವರೆಗೆ ಅಕ್ಷರಗಳ ಪಾದವುಳ್ಳವನ್ನು ಕ್ರಮವಾಗಿ ಸತ್ಕೃತಿ (27), ಮಹತ್ಕೃತಿ (28), ಭಾಸ್ವತ್ಕೃತಿ (29), ವಿಲಸತ್ಕೃತಿ (30) ಎಂದು ಸಂಜ್ಞೆಯಿಟ್ಟು ತಿಳಿಸಿದ್ದಾರೆ. 'ವೃತ್ತವಿಲಾಸವೈಭವ' ಎಂಬ ಛಂದೋಗ್ರಂಥವನ್ನು ಸ್ವತಃ ರಚಿಸಿ, ಅದರಲ್ಲಿ 230 ನವೋತ್ಪಾದ್ಯ ವೃತ್ತಗಳನ್ನು ಹೆಸರಿಸಿ, ಲಕ್ಷ್ಯ ಲಕ್ಷಣಗಳನ್ನು ನೀಡಿರುತ್ತಾರೆ. ಪ್ರಕೃತ, ತಮ್ಮ ಈ ಲೇಖನದಲ್ಲಿ ಗರತಿ, ಭರತನಾಟ್ಯ, ಪ್ರಿಯಬಂಧು, ಅಲಂಕಾರ, ತತ್ತ್ವ ಎಂಬ ವೃತ್ತಗಳನ್ನು ಲಾಕ್ಷಣಿಕವಾಗಿ ಕಾಣಿಸಿದ್ದಾರೆ. ಪ್ರತಿಯೊಂದು ನವೋತ್ಪಾದ್ಯ ವೃತ್ತದಲ್ಲಿಯೂ ಬೋಧಪ್ರದವೂ ಅಲಂಕಾರಿಕವೂ ಆದ ಸಾಹಿತ್ಯಾಂಶವನ್ನು ತುಂಬಿದ್ದಾರೆ.

ಇದುವರೆಗೆ ಪ್ರಚಲಿತವಾದ ಯಾವುದೇ ಸಮವೃತ್ತಲ್ಲಿಯೂ ಪಾದಾಂತ್ಯಾಕ್ಷರವು ಗುರ್ವಕ್ಷರವೇ ಆಗಿರುತ್ತದೆ. ಆದರೆ ಮಾನ್ಯಲೇಖಕರು ಪಾದಾಂತ್ಯಲಘುವಾಗಿರುವ ವೃತ್ತಗಳನ್ನು ಹೇಳುತ್ತಾರೆ. ಆ ಪಾದಾಂತ್ಯಾಕ್ಷರವನ್ನು ಗುರುವಾಗುವಂತೆ ಎಳೆದು ಓದಿದರೆ ಗಣದೋಷವುಂಟಾಗುವುದು. 'ಭರತನಾಟ್ಯ' ಎಂಬ ವೃತ್ತ ಅಂತಹುದು. ನವೀನಾವಿಷ್ಕರಣೆಯಲ್ಲಿ ಲೇಖಕರು ಸಂಗೀತಶಾಸ್ತ್ರದ ನಿರೂಪಣಾಕ್ರಮವನ್ನು ಎತ್ತಿಕೊಂಡಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಉದಾ: 'ತ್ರಿನಯನ' ಎಂಬುದೊಂದು ವೃತ್ತದ ಹೆಸರು ಮತ್ತು ಲಕ್ಷಣನಿರೂಪಣೆಯೂ ಆಗಿದೆ. ಅದರಲ್ಲಿ ನನನಯನ-ಎಂಬ ಆರು ಗಣಗಳಿರುತ್ತವೆ.

ಆದರೆ, ಇದರಲ್ಲಿ ಪಾದಾಂತ್ಯವು ಹ್ರಸ್ವವಿರುತ್ತದೆ. ಪ್ರಚಲಿತವಿರುವ ಛಂದಶ್ಶಾಸ್ತ್ರದ ಪ್ರಕಾರ ಲ (ಲಘು) ಮತ್ತು ಲಗಂ (ಲಘು ಮತ್ತು ಗುರು) ಇವೆರಡು ಗಣಶೇಷಾಕ್ಷರಗಳಾಗಿದ್ದು ಪಾದದ ಕೊನೆಗೆ ಮಾತ್ರ ಬರಲು ಅರ್ಹವಾದುವು. ಪಾದದ ನಡುವೆ ಅವು ಬರುವಂತಿಲ್ಲ. ಆದರೆ, ಶ್ರೀ ನಿಜಗುಣರು ಅವನ್ನು ಪಾದಮಧ್ಯದಲ್ಲಿಯೂ ಬರಮಾಡಿಸಿ, ವೃತ್ತರೂಪ ನಿರೂಪಣೆ ಮಾಡುತ್ತಾರೆ ! ಉದಾ: ಸಂಸಾರ ಸಾಗರ ಎಂಬ ಸಮವೃತ್ತದಲ್ಲಿ "ಸಸಸರಸ ಸಗರ' ಎಂಬ ಗಣಾಕ್ಷರಗಳಲ್ಲಿ ಪೂರಕ್ಷರಗಳಿರುವ ಗಣಗಳ ನಡುವೆ ಗ (ಏಕಗುರು) ಬರುತ್ತದೆ. ಇದು ಲಕ್ಷಣಕ್ಕೆ ಸರಿಯಲ್ಲ. ಇದನ್ನೇ (ಗ, ರ–ಎಂಬುದನ್ನೇ) ತ,ಗ (– –υ/–) ಎನ್ನಬಹುದಿತ್ತು. ಒಂದೇ ಅಕ್ಷರ ಗಣ ಎರಡು ಬಾರಿ ಬಂದಲ್ಲಿ ಅದೇ ಗಣನಾಮವನ್ನು ದೀರ್ಘಾಕ್ಷರವಾಗಿ ಕಾಣಿಸಬಹುದೆಂಬುದು (ಉದಾ : ರ ರ =ರಾ, ಮ ಮ=ಮಾ) ಛಂದಸ್ಸಿಗೆ ಸಂಗೀತದ ಲಕ್ಷಣ ಸ್ವೀಕಾರದ ಪ್ರಮೇಯವಾಗಿ, ಲೇಖಕರ ಸಂಶೋಧನೆಯಾಗಿದೆ. ಶ್ರೀ ಕುಮಾರ ನಿಜಗುಣರು ಇನ್ನೂ ಮುಂದುವರಿದು ಅಲ್ಪಪ್ರಾಣ ವ್ಯಂಜನಗಳನ್ನು ಮಹಾಪ್ರಾಣವಾಗಿ ಮಾಡಿಯೂ, ಎರಡು ಬಾರಿ ಬಂದ ಸ್ವರಯುಕ್ತ ವ್ಯಂಜನವನ್ನು ದ್ವಿತ್ವವಾಗಿ ಮಾಡಿಯೂ ಲಕ್ಷ್ಯ ಲಕ್ಷಣ ನಿರೂಪಣೆಯನ್ನು ಮಾಡಿರುತ್ತಾರೆ. ಉದಾ : ಘನಸಜ್ಜನ – ಎಂಬ ವೃತ್ತನಾಮವು ಅದರ ಲಕ್ಷಣಸೂತ್ರವೆಂದು ತಿಳಿಸುತ್ತ, ಅದರಲ್ಲಿ ಗನಸ ಜಜನ–ಎಂದು ಗಣಾಕ್ಷರಗಳನ್ನು ಕಾಣಿಸಿರುತ್ತಾರೆ. ಇದರಲ್ಲಿ ಮೊದಲನೆಯದು ಗಣವಲ್ಲ ; ಅದೊಂದು ಗುರು ಅಕ್ಷರ. ಇಂತಹ ಗಣಶೇಷವೆನಿಸುವ ಅಥವಾ ಅಪೂರ್ಣವೆನಿಸುವ ಜೋಡಣೆಗೆ ಲಾಕ್ಷಣಿಕ ಮಾನ್ಯತೆ ಹೇಗೆ ? ಇವರ ನಿರೂಪಣೆಯಲ್ಲಿ ಅಕ್ಷರ ಪಲ್ಲಟಗಳನ್ನೂ ಮಾಡಿಕೊಂಡಿರುವುದು ಲಕ್ಷಣಬದ್ಧವಾದೀತೆ ? ವರ್ಗಪ್ರಾಸ, ಸಮೀಪಪ್ರಾಸ, ಅಭೇದಪ್ರಾಸ, ಮಿತ್ರಪ್ರಾಸಗಳು ಪದ್ಯರಚನೆಯಲ್ಲಿ ಗಣಾಕ್ಷರಗಳಿಗೆ ಸಂಬಂಧಿಸುವಂತೆ ನಿರೂಪಿಸಿರುವುದು ನನಗೆ ಸರಿಗಾಣುವುದಿಲ್ಲ. ಒಟ್ಟಿನಲ್ಲಿ ಈ ಲೇಖನವು, ಪದ್ಯರಚನೆಯಲ್ಲಿ ಛಂದಸ್ಸನ್ನು ಅನುಸರಿಸುವ ಕಡೆಗೆ ಮುಖಮಾಡಲು ಒಳ್ಳೆಯ ಪ್ರೇರಣೆಯನ್ನು ನೀಡುವುದು ನಿಶ್ಚಯ. ●

—ಟಿ. ಕೇಶವ ಭಟ್ಟ

## ೩. ಛಂದಃಶಾಸ್ತ್ರದಲ್ಲಿ ನೂತನಾವಿಷ್ಕಾರ

'ಕರ್ನಾಟಕ ಲೋಚನ'ದ ಡಿಸೆಂಬರ್ 1995ರ ಸಂಚಿಕೆಯಲ್ಲಿ ಕುಮಾರ ನಿಜಗುಣರ 'ಛಂದಸ್ಸಿನಾವ್ಯತೆ ಹಾಗೂ ನವವೃತ್ತಗಳಾವಿಷ್ಕರಣ' ಎಂಬ ಲೇಖನವು ಪ್ರಕಟವಾಗಿದೆ. ಅದರಲ್ಲಿ ಛಂದಸ್ಸು ಕಾವ್ಯಕ್ಕೆ ಹೇಗೆ ಮತ್ತು ಏಕೆ ಮುಖ್ಯ, ಅಗತ್ಯ ಎಂಬುದನ್ನು ಸಾಧಾರವಾಗಿ ಪ್ರತಿಪಾದಿಸಿ, ನಾನಾವೃತ್ತಗಳಲ್ಲಿ ಹೊಸ ಆವಿಷ್ಕಾರವು ಉಚಿತವೂ

ಸಾಧ್ಯವೂ ಹೌದು ಎಂಬುದನ್ನು ಲೇಖಕರು ಪ್ರತಿಭಾಸಂಪನ್ನವಾದ ಸ್ವರಚಿತ ಉದಾಹರಣೆಗಳಿಂದ ಸಮರ್ಥಿಸಿದ್ದಾರೆ. ಶಾಸ್ತ್ರ ಹಾಗೂ ಸಂಪ್ರದಾಯಗಳ ಬಗೆಗೆ ಅವರಿಗೆ ಇರುವ ಗೌರವಾದರಗಳು, ಅವುಗಳಿಂದ ಆಗುವ-ಅಥವಾ ಆಗಬೇಕಾದ ಪ್ರಯೋಜನಗಳನ್ನು ಪಡೆದುಕೊಳ್ಳುವುದರ ಸಾಧುತ್ವ-ಇವು ಲೇಖನದಲ್ಲಿ ಎದ್ದು ಕಾಣುತ್ತವೆ. ಅವರ ಕವಿ ಹೃದಯವೂ ಛಂದಸ್ಸಿನಲ್ಲಿ ಅವರಿಗೆ ಇರುವ ಅಧಿಕಾರವೂ ಸ್ಪಷ್ಟವಾಗುತ್ತವೆ.

ಕುಮಾರ ನಿಜಗುಣರು ತಮ್ಮ ಲೇಖನದ ಉತ್ತರಾರ್ಧದಲ್ಲಿ, ಹೊಸ ಹೊಸ (ಎಂದರೆ ಪ್ರಸ್ತಾರ ಸಿದ್ಧವಾಗಿದ್ದರೂ ಪೂರ್ವಕವಿಗಳ ಬಳಸದಿರುವ) ವೃತ್ತಗಳಲ್ಲಿ ಪದ್ಯಗಳನ್ನು ರಚಿಸುವಾಗ ಅಂತಹ ವೃತ್ತಗಳಿಗೆ ಲಕ್ಷಣ ಸೂಚಕವಾಗಿಯೂ ಅರ್ಥಪೂರ್ಣವಾಗಿಯೂ ಇರುವಂತೆ ಹೆಸರುಗಳನ್ನು ಸಂಯೋಜಿಸುವುದು ಸಾಧ್ಯ. ಹೀಗೆ ಮಾಡಿದರೆ ಅನೇಕ ಹೊಸ ವೃತ್ತಗಳ ಆವಿಷ್ಕರಣವು ಅನುಕೂಲಿಸುತ್ತದೆ, ಲಕ್ಷಣಗಳನ್ನು ನೆನಪಿಟ್ಟುಕೊಳ್ಳುವುದು ಸುಲಭವಾಗುತ್ತದೆ ಎಂಬ ಸಲಹೆಗಳನ್ನು ಮಂಡಿಸಿದ್ದಾರೆ ; ಅಲ್ಲದೆ ಇದಕ್ಕಾಗಿ ತಾವೇ ನಿರ್ಮಿಸಿದ ಹಲವು ವೃತ್ತಗಳನ್ನೂ ಅವುಗಳ ಹೆಸರುಗಳನ್ನೂ ಉದಾಹರಿಸಿದ್ದಾರೆ ; ಹೆಸರುಗಳನ್ನಿಡುವಲ್ಲಿ ಅವರು ಏರ್ಪಡಿಸಿಕೊಂಡಿರುವ ನಿಯಮಗಳನ್ನು ಹೀಗೆ ಸಂಗ್ರಹಿಸಬಹುದು : i. ಮಯರಸತಜಭನ ಎಂಬ ಅಕ್ಷರಗಳು ತಮ್ಮಿಂದ ಮೊದಲಾಗುವ ಮಗಣ, ಯಗಣ ಇತ್ಯಾದಿ (ತ್ರಿಕ) ಗಣಗಳನ್ನು ಸಂಕೇತಿಸುತ್ತವೆ. ii. ಅವುಗಳ ದೀರ್ಘಗಳು ಆಯಾಗಣವು ಇನ್ನೊಮ್ಮೆ ಪುನರುಕ್ತವಾಗುತ್ತದೆಂಬುದನ್ನು ಸೂಚಿಸುತ್ತವೆ. (ಇದಕ್ಕೆ ದೃಷ್ಟಾಂತವನ್ನು ಸಂಗೀತದಿಂದ ಎತ್ತಿಕೊಂಡಿದ್ದಾರೆ. ಉದಾ. ಸಾ = ಸಸ, ರೀ = ರಿರಿ ಇತ್ಯಾದಿ), iii. ಅವುಗಳಲ್ಲಿ ದ್ವಿತ್ವವು ಅನುಕ್ರಮದಲ್ಲಿ ಉಚ್ಚಾರಗೊಂಡ ಅಕ್ಷರಗಳು ಸೂಚಿಸುವ ಎರಡು ಗಣಗಳನ್ನು ನಿರ್ದೇಶಿಸುತ್ತದೆ. ಉದಾ. ಮ್ಮ = ಮಮ, ಜ್ಜ = ಜಜ, ಜ್ಯ = ಜಯ, ನ್ಮ = ನಮ. ಲಗಗಳು ಕ್ರಮವಾಗಿ ಲಘು ಗುರುಗಳನ್ನು ಸಂಕೇತಿಸುತ್ತವೆ. iv. ಪ್ರಾಸ ಪ್ರಯೋಗದಲ್ಲಿ ಸಮೀಪಪ್ರಾಸ ಅಭೇದ ಪ್ರಾಸ ಮತ್ತು ಮಿತ್ರಪ್ರಾಸಗಳೆಂಬ ಪರ್ಯಾಯಾಕ್ಷರಗಳ ಬಳಕೆಯಿರುವಂತೆ ಮಯರಸತ ಜಭನಲಗ ಎಂಬ ಅಕ್ಷರಗಳ ಪೈಕಿ ತಜಗ ಎಂಬ ಅಲ್ಪಪ್ರಾಣಗಳಿಗೆ ಥಝಘ ಎಂಬ ಮಹಾಪ್ರಾಣಗಳನ್ನೂ ಭ ಎಂಬ ಮಹಾಪ್ರಾಣಕ್ಕೆ ಬ ಎಂಬ ಅಲ್ಪಪ್ರಾಣವನ್ನೂ ಸ-ಕ್ಕೆ ಶಷಗಳನ್ನೂ ಲಕ್ಕೆ ಳ-ವನ್ನೂ ಪರ್ಯಾಯಗಳನ್ನಾಗಿ ಉಪಯೋಗಿಸಬಹುದು. ಹೀಗೆ ಮಾಡುವುದರಿಂದ ಸಾವಿರಾರು ಅರ್ಥಪೂರ್ಣವೂ ಗಣ ವಿನ್ಯಾಸ ಸೂಚಕವೂ ಆದ ಹೆಸರುಗಳು ದೊರೆಯುತ್ತವೆ. ಈ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಅವರು ನಾರಾಯಣಶರ, ರಾಮರಾಜ್ಯ, ಸರಸ ಭಾಷಣ, ಬಾಲಮರಾಳ, ಬಜ್ಜರಾಸನ, ನಗಜಾನಾಥ, ಝುರ್ಝುರಬಾಜನ ಮುಂತಾದ ಹೆಸರುಗಳನ್ನೂ ಅವುಗಳು ಸೂಚಿಸುವ ಗಣ ಸಂಯೋಜನೆಯಿರುವ ವೃತ್ತಗಳನ್ನೂ ನಿರ್ದುಷ್ಟವಾಗಿ ನಿರ್ಮಿಸಿ ಅಭಿನಂದನೆಗೆ

ಪಾತ್ರರಾಗಿದ್ದಾರೆ. ಅಲ್ಲದೆ ಇಂತಹ ಹಲವು ಇತರ ಹೆಸರುಗಳನ್ನೂ ಸೂಚಿಸಿದ್ದಾರೆ. (ಉದಾ. ಭ್ರಮರಗಾನ = ಭರಮರಗಗನ, ಸಜ್ಜನ ಮಾನ್ಯ = ಸಜಜನಮಮನಯ, ಸಾಮ್ರಾಜ್ಯ = ಸಸಮರರ ಜಯ).

ಲೇಖನದ ಕೊನೆಯಲ್ಲಿ ಕುಮಾರ ಸಿಜಗುಣರು 'ಈ ನೂತನಾವಿಷ್ಕರಣವು ಸಂಪ್ರದಾಯಕ್ಕೆ ಹೆಚ್ಚಿನ ಕುಂದು ತರುವುದಿಲ್ಲವೆಂದು ನನ್ನ ಭಾವನೆ. ಒಂದು ವೇಳೆ ಮೇಲಿನ ಜಿಜ್ಞಾಸೆ ಛಂದಃಶಾಸ್ತ್ರ ನಿಯಮಕ್ಕೆ ಸಮಂಜಸವಲ್ಲ ಎಂದು ಅನಿಸಿದರೆ ದಯ ವಿಟ್ಟು ಸಹೃದಯ ವಿದ್ವಾಂಸರು ಶಾಸ್ತ್ರೋಕ್ತವಾಗಿ ತಿಳಿಸಿದರೆ ಇದನ್ನು ಕೈಬಿಡೋಣ' ಎಂದಿದ್ದಾರೆ. ಹೀಗೆ ಶಾಸ್ತ್ರ ಸಂಪ್ರದಾಯಗಳ ವಿಷಯದಲ್ಲಿ ಅವರಿಗಿರುವ ಗೌರವಶ್ರದ್ಧೆ ಗಳು ಸ್ಪಷ್ಟವಾಗುತ್ತವೆ.

ಇಂತಹ ನೂತನ ಪ್ರಯೋಗದಿಂದ ಛಂದಃಶಾಸ್ತ್ರಕ್ಕಾಗಲಿ ಸಂಪ್ರದಾಯಕ್ಕಾಗಲಿ ಕುಂದು ಉಂಟಾಗುವ ಪ್ರಶ್ನೆಯು ಏಳುವುದಿಲ್ಲ. ಏಕೆಂದರೆ ಇಂತಹ ಮಾಲಾವೃತ್ತ ಗಳಿಗೆ ಛಂದಶ್ಶಾಸ್ತ್ರವು ಷಟ್ಪ್ರತ್ಯಯ ಮೂಲಕವಾದ ಅವಕಾಶವನ್ನು ಮಾಡಿಕೊಟ್ಟಿದೆ. ಇದು ಸಮುದ್ರದಲ್ಲಿ ದುರ್ಗಮ ಸ್ಥಾನಗಳಿಗೆ ಇಳಿದು ಹೊಸ ಐಶ್ವರ್ಯವನ್ನು ತಂದಂತೆ. ವೃತ್ತಗಳಿಗೆ ಗಣವಿನ್ಯಾಸ ಸೂಚಕವಾದ ಹೆಸರುಗಳನ್ನು ಸಂಯೋಜಿಸುವಲ್ಲಿ ಯಾವ ಸಂಪ್ರದಾಯವೂ ಇಲ್ಲದಿರುವುದರಿಂದ ಸಂಪ್ರದಾಯ ಭಂಗದ ಶಂಕೆಯೂ ಉಂಟಾಗುವು ದಿಲ್ಲ. ಶಾಸ್ತ್ರ ಮತ್ತು ಸಂಪ್ರದಾಯಗಳನ್ನು ಕುರಿತು ಕೆಲವು ಸಾಮಾನ್ಯವಾದ ಮಾತು ಗಳನ್ನು ಬರೆಯುವುದು ಈ ಸಂದರ್ಭಕ್ಕೆ ಅನುಚಿತವಾಗಲಾರದು.

ನಿತ್ಯವಾದ( = ವೇದೋಪನಿಷತ್ತುಗಳು) ಅಥವಾ ಮಾನವ ನಿರ್ಮಿತವಾದ (ಉದಾ ಸ್ಮೃತಿಗಳು, ಗೃಹ್ಯ ಸೂತ್ರಗಳು, ಅಪರಾವಿದ್ಯೆಗಳನ್ನು ಬೋಧಿಸುವ ಶಾಸ್ತ್ರಗಳು) ಯಾವುದು ನಿವೃತ್ತಿಮಾರ್ಗವನ್ನಾಗಲಿ ಪ್ರವೃತ್ತಿ ಮಾರ್ಗವನ್ನಾಗಲಿ ಉಪದೇಶಿಸು ತ್ತದೋ ಅದು ಶಾಸ್ತ್ರ ಎಂದು ಹಿರಿಯರು ಹೇಳುತ್ತಾರೆ. 'ಶಾಸತೇ ತ್ರಾಯತೇ ಚ' ಎಂಬ ನಿಷ್ಪತ್ತಿಯೂ ಶಾಸ್ತ್ರಶಬ್ದಕ್ಕೆ ಉಂಟು. ಕೆಲವು ಶಾಸ್ತ್ರಗಳು-ಉದಾ ಕಾನೂನು, ಯೋಗ-ಶಾಸಕಗಳು, ವಿಧಿನಿಷೇಧ ರೂಪವಾದವುಗಳು. ಅಪರಾವಿದ್ಯೆಗಳನ್ನು ಉಪ ದೇಶಿಸುವ ಶಾಸ್ತ್ರಗಳು ಸಾಮಾನ್ಯವಾಗಿ ವರ್ಣನಾತ್ಮಕಗಳು. ಶಾಸ್ತ್ರವು ಕಾರಕವೆ ಜ್ಞಾಪಕವೆ ಎಂಬ ಜಿಜ್ಞಾಸೆಯೂ ಇದೆ : ಎಂದರೆ ಶಾಸ್ತ್ರಕ್ಕೆ ಕರ್ತನೊಬ್ಬನನ್ನು ಒಂದು ಕಾರ್ಯದಲ್ಲಿ ನಿಯೋಜಿಸುವುದಕ್ಕೂ ಅದನ್ನು ಪ್ರೇರಿಸುವಂತೆ ಮಾಡುವುದಕ್ಕೂ ಅಧಿಕಾರ ವಿದೆಯೆ? ವಸ್ತುಸ್ಥಿತಿಯನ್ನು ಯಥಾರ್ಥವಾಗಿ ತಿಳಿಸಿಕೊಟ್ಟು ಅದನ್ನು ಮಾಡುವುದನ್ನಾ ಗಲಿ ಬಿಡುವುದನ್ನಾಗಲಿ ಕರ್ತನಿಗೆ ಬಿಡುವುದಕ್ಕೆ ಮಾತ್ರ ಶಾಸ್ತ್ರದ ವ್ಯಾಪ್ತಿಯೆ? ಪರಾ ಶಾಸ್ತ್ರಗಳು ಬಹುಮಟ್ಟಿಗೆ ಯಥಾರ್ಥವನ್ನು ಮಾತ್ರ ಉಪದೇಶಿಸುತ್ತವೆ, ಪ್ರತ್ಯಕ್ಷ ಹಾಗೂ ಅನುಮಾನಗಳಿಂದ ಮಾತ್ರ ಸಿದ್ಧವಾಗದ ಜ್ಞಾನವನ್ನು ಉಪದೇಶಿಸುತ್ತವೆ.

ವಿಧಿ ನಿಷೇಧಗಳೆಂದು ತೋರುವ ವಾಕ್ಯಗಳನ್ನು ಪರಮಾರ್ಥದಲ್ಲಿ ಜ್ಞಾಪಕಗಳೆಂದೇ ತಿಳಿಯಬೇಕು ; ಹೀಗಾಗಿ ಅವು ತಟಸ್ಥಗಳೇ.

ಶಾಸ್ತ್ರಗಳಲ್ಲಿ ಕೆಲವು ಜಿಜ್ಞಾಸಾರೂಪದಲ್ಲಿದ್ದು (ಉದಾ. ತರ್ಕ, ಬ್ರಹ್ಮಸೂತ್ರಗಳು ಹಾಗೂ ಅವುಗಳ ಭಾಷ್ಯಗಳು) ಪ್ರಮೇಯ ಪ್ರಮಾಣ ವಿಚಾರವನ್ನು ಒಳಗೊಂಡಿರುತ್ತವೆ. ಇನ್ನು ಕೆಲವು ಅನುಶಾಸನ ರೂಪದ ಉಪದೇಶವನ್ನು (ಉದಾ. ಯೋಗ, ತಂತ್ರ, ಗೃಹ್ಯಸೂತ್ರಗಳು) ಒಳಗೊಂಡಿರುತ್ತವೆ. ಮತ್ತೆ ಕೆಲವು ವರ್ಣನಾತ್ಮಕವಾಗಿರುತ್ತವೆ,(ಉದಾ. ಛಂದಸ್ಸು, ಸಂಗೀತ, ಅಲಂಕಾರ). ಯಾವುದೇ ಶಾಸ್ತ್ರವಾಗಿರಲಿ ಅದರ ವಸ್ತು, ವಿಧಾನ ಮತ್ತು ಸ್ವಭಾವಗಳಿಗೆ ಅನುಗುಣವಾದ ಪರಿಭಾಷೆಯನ್ನೂ ಉಪದೇಶ ತಂತ್ರವನ್ನೂ ಏರ್ಪಡಿಸಿಕೊಳ್ಳುತ್ತದೆ. ಸ್ವಪಕ್ಷ, ಪೂರ್ವಪಕ್ಷ ಮತ್ತು ವಿಪಕ್ಷಗಳಿಂದ ಅದು ಮಂಡನ-ಖಂಡನಗಳಿಗೆ ಅನುಕೂಲಿಸುವ ಕಲ್ಪನೆ, ಪ್ರಮೇಯ, ತತ್ವ, ವಾದ ವಿಧಾನ (ಅಥವಾ ಮಂಡನ ವಿಧಾನ) ಮುಂತಾದವುಗಳನ್ನೂ ಇವುಗಳನ್ನು ಸುವ್ಯವಸ್ಥಿತವಾಗಿ, ನಿರ್ದುಷ್ಟವಾಗಿ, ಪುನರುಕ್ತಿ, ಅವ್ಯಾಪ್ತಿ, ಅತಿವ್ಯಾಪ್ತಿ ಮುಂತಾದ ದೋಷಗಳಿಲ್ಲದಂತೆ ಬೋಧಿಸಲು ಅನುಕೂಲವಾದ ಸಂಜ್ಞೆಗಳನ್ನೂ ಅವುಗಳ ಲಕ್ಷಣ ಮತ್ತು ವಿವರಣೆಗಳನ್ನೂ, ವ್ಯಾಪ್ತಿಗಳನ್ನೂ ಏರ್ಪಡಿಸಿಕೊಳ್ಳುತ್ತದೆ. ಇದಕ್ಕಾಗಿ ಪ್ರತ್ಯೇಕವಾದ ಒಂದು ಸಂಜ್ಞಾಪ್ರಕರಣವೋ ಪದಾರ್ಥ ಪ್ರಕರಣವೋ ಒಮ್ಮೊಮ್ಮೆ ಇರುವುದೂ ಉಂಟು. ಹೀಗೆ ಮಾಡದೆ ಇಂತಹ ಉಪಕರಣ ಸಾಮಗ್ರಿಯನ್ನು ಸಂದರ್ಭೋಚಿತವಾಗಿ, ಯಥೋಚಿತವಾಗಿ ಉಪಯೋಗಿಸಿ ವಿವರಿಸಿಕೊಳ್ಳುವುದೂ ಉಂಟು.

ಸಂಪ್ರದಾಯವೆಂದರೆ ಅನುಭವಿಗಳಾದ ಆಚಾರ್ಯರುಗಳ ಪರಂಪರೆಯಿಂದ ಅನೂಚಾನವಾಗಿ ಉಪದೇಶವಾಗಿ ಸ್ಥಾಪಿತವಾದ ಶಿಕ್ಷಣ ಪದ್ಧತಿ. ಅನುಭವವೇ ಮುಖ್ಯ ಗುರಿಯೂ ಪ್ರಮಾಣವೂ ಆಗಿರುವ ಶಾಸ್ತ್ರಗಳ ಬೋಧೆಯಲ್ಲಿ (ಉದಾ. ಸಂಗೀತ, ಛಂದಸ್ಸು, ನೃತ್ಯ, ವೇದಾಂತ) ಸಂಪ್ರದಾಯಕ್ಕೆ ಹೆಚ್ಚಿನ ಮಹತ್ತ್ವವಿದೆ. ಸಂಪ್ರದಾಯದ ಎಲ್ಲೆಯೊಳಗೆ ವ್ಯಕ್ತಿಯು ಸ್ವಂತ ಪ್ರತಿಭೆಯಿಂದ ಮಾಡುವ ಹೊಸ ಆವಿಷ್ಕಾರಗಳಿಗೆ ಇಂತಹ ಶಾಸ್ತ್ರಗಳಲ್ಲಿ ಸ್ಥಾನವಿದೆ, ಸ್ವಾಗತವಿದೆ. ಅದಕ್ಕೆ ಹೊರತಾಗಿ ಅಥವಾ ವಿರೋಧವಾಗಿ ವ್ಯಕ್ತಿಯು ಸ್ವಬುದ್ಧಿಯಿಂದ ಸೃಷ್ಟಿಸುವ ಆವಿಷ್ಕಾರಗಳಿಗೆ ಮಹತ್ತ್ವವಿಲ್ಲ.

ಕುಮಾರ ನಿಜಗುಣರು ಮಾಡಿರುವ ಸಲಹೆಗಳು ಛಂದಃಶಾಸ್ತ್ರದ ಮೂಲ ಪ್ರಮೇಯಗಳ ಜಿಜ್ಞಾಸೆಯನ್ನು ಒಳಗೊಂಡಿಲ್ಲ. ಸಂಪ್ರದಾಯವು ಇಲ್ಲದಿರುವೆಡೆಯಲ್ಲಿ ಅಂತಹ ಸಂಪ್ರದಾಯವೊಂದನ್ನು ಸ್ಥಾಪಿಸುವ ಸಾಧ್ಯತೆ ಮತ್ತು ಸಾಧುತ್ವಗಳ ಬಗೆಗೆ ಹೊರಟಿವೆ. ಈಗ ರೂಢಿಯಲ್ಲಿಲ್ಲದೆ ಪ್ರಸ್ತಾರ ಸಾಧ್ಯ ಮಾತ್ರವಾಗಿರುವ ಬೇರೆ ಬೇರೆ ಮಾಲಾವೃತ್ತಗಳನ್ನು ರಚಿಸುವುದೂ ಅವುಗಳಿಗೆ ಗಣವಿನ್ಯಾಸ ಸೂಚಕವಾದ

ಸಂಕೇತಗಳನ್ನು ಬಳಸಿಕೊಂಡು ಅರ್ಥಪೂರ್ಣವಾದ ಹೆಸರುಗಳನ್ನು ನಿರ್ಮಿಸಿಕೊಳ್ಳುವುದೂ ಇವಕ್ಕೆ ಅಗತ್ಯವಾದ ಶಾಸ್ತ್ರವಿರೋಧವಲ್ಲದ ನಿಯಮಗಳನ್ನು ಏರ್ಪಡಿಸಿಕೊಳ್ಳುವುದೂ ಛಂದಃಶಾಸ್ತ್ರಕ್ಕಾಗಲಿ ಅದರ ಸಂಪ್ರದಾಯಕ್ಕಾಗಲಿ ವಿರೋಧವಾಗಿಲ್ಲವಷ್ಟೇ ಅಲ್ಲ, ಸಮಂಜಸವೂ ಪ್ರಯೋಗಕ್ಷಮವೂ ಸ್ವಾಗತಾರ್ಹವೂ ಆಧುನಿಕ ಕವಿಗಳಿಗೆ ಕರೆಯೋಲೆಯೂ, ಶಾಸ್ತ್ರ-ಪ್ರಯೋಗಗಳಿಗೆ ಪ್ರಯೋಜನಕರವೂ ಆಗಿವೆ. ಇಂತಹ ಆವಿಷ್ಕಾರಗಳು ಆಯಾ ಶಾಸ್ತ್ರಕ್ಕೆ ಆಯಾಮ ವಿಸ್ತಾರವನ್ನೂ ಹೊಸ ಪ್ರಾಣ ಸಂಚಾರವನ್ನೂ ನೀಡಬಲ್ಲವು. ಶಾಸ್ತ್ರಾಂತರಗಳಲ್ಲಿ ಇಂತಹ ಅದೆಷ್ಟೋ ಪ್ರಯತ್ನಗಳು ನಡೆದು ಯಶಸ್ವಿಯಾಗಿವೆ. ಉದಾಹರಣೆಗೆ, ಕರ್ನಾಟಕ ಸಂಗೀತದಲ್ಲಿ ಷಟ್ಪ್ರತ್ಯಯಗಳ ನೆರವಿನಿಂದ ಸಾವಿರಾರು ದೇಶೀತಾಳಗಳನ್ನು ಪಡೆದು ವ್ಯವಸ್ಥೆಗೊಳಿಸಲೂ ಅವುಗಳನ್ನು ನಿಷ್ಕೃಷ್ಟಗೊಳಿಸಲೂ ಸಾಧ್ಯವಾಗಿದೆ. ಮೇಳಕರ್ತಗಳನ್ನು ಪ್ರಸ್ತಾರಕ್ರಮದಿಂದ ಪಡೆದು, ಅವುಗಳಿಗೆ ವರರುಚಿ ಪ್ರಣೀತವಾದ'ಕಟಪಯಾದಿ' ಕ್ರಮವನ್ನು ಅನುಸರಿಸಿ ಸಂಖ್ಯಾಸೂಚಕವಾದ ಹೆಸರುಗಳನ್ನಿಟ್ಟು, ಈ ಸಂಖ್ಯೆಯಿಂದ ಆಯಾಮೇಳಕರ್ತದ ಲಕ್ಷಣವನ್ನು, ಎಂದರೆ ಸ್ವರಸಂಪತ್ತಿಯನ್ನು ಪಡೆಯುವುದು ಪ್ರಸಿದ್ಧವೇ ಆಗಿದೆ. ಸ್ಥಾಯಿಯಲ್ಲಿರುವ ಇಪ್ಪತ್ತೆರಡು ಶ್ರುತಿಗಳಿಗೆ ಇದೇ ಕ್ರಮದಲ್ಲಿ ಹೆಸರುಗಳನ್ನಿಟ್ಟು, ಅಂತಹ ಸಂಖ್ಯೆಯಿಂದ ಸಪ್ತಸ್ವರಗಳಲ್ಲಿ ಆಯಾ ಶ್ರುತಿಯ ಅನುಕ್ರಮವನ್ನೂ ಸ್ಥಾನವನ್ನೂ ಸೂಚಿಸುವ ಪ್ರಯತ್ನವೂ ನಡೆದಿದೆ.

ರಾ. ಸತ್ಯನಾರಾಯಣ.

## ೪. "ನುಡಿಗೆಲ್ಲಂ ಸಲ್ಲದ"—ನುಡಿಗಟ್ಟಿನ ಕೇಂದ್ರಬಿಂದು.

ಕವಿರಾಜಮಾರ್ಗಕಾರನು ಚತ್ತಾಣ ಬೆದಂಡೆಗಳು ಹಾಗೂ ಆತನ ಕಾಲದಲ್ಲಿ ಪ್ರಚುರವಾಗಿದ್ದ ಪ್ರಸಿದ್ಧ ಕಾವ್ಯಗಳ ಸಂಬಂಧದ ಬಗೆಗೆ ನಿರೂಪಿಸಿರುವ ವಿಚಾರವನ್ನು ಒಳಕೊಂಡ ಮುಂದಿನ ಕಂದದ ವಿವರಣೆಯನ್ನು ಈಗಾಗಲೆ ಅನೇಕ ವಿದ್ವನ್ಮಣಿಗಳು ಹಲವಾರು ಕಡೆ ವಿವೇಚಿಸಿರುವುದು ತಿಳಿದ ಸಂಗತಿಯೇ ಆಗಿದೆ. ಅವುಗಳನ್ನೆಲ್ಲ ಒಂದೆಡೆ 'ಕನ್ನಡದ ಪ್ರಾಚೀನ ಸಾಹಿತ್ಯ ಲಕ್ಷಣಗಳು– ಮರುನೋಟ'ದಲ್ಲಿ ಪ್ರೊ. ಟಿ. ಕೇಶವ ಭಟ್ಟರು ಸಂಕ್ಷಿಪ್ತವಾಗಿ ವಿಮರ್ಶೆಯ ಒರೆಗಲ್ಲಿಗೆ ಹಚ್ಚಿದ್ದಾರೆ. ಓರೆ-ಕೋರೆಗಳ ಒಂದು ಮರುನೋಟವನ್ನು ಬೀರಿದ್ದಾರೆ. ಆ ದಿಶೆಯಲ್ಲಿ ಅಲ್ಲದಿದ್ದರೂ ಈ ಒಂದು ಪ್ರಯತ್ನ ನೃಪತುಂಗನ ಕಂದದ ಒಳನೋಟವಾಗಿದೆ. ಕಂದದಲ್ಲಿನ ಬಂಧ ಕ್ಲಿಷ್ಟವೇನಿಲ್ಲ. ಆದರೂ ಪಂಡಿತವರ್ಗದ ಬುದ್ಧಿಮಂಥನಕ್ಕೆ ಸಾಕಷ್ಟು ಎಡೆಗೊಟ್ಟಿರುವುದು ಅದರ ರಚನಾ ವೈಶಿಷ್ಟ್ಯ; ದೇಸಿನುಡಿಗಟ್ಟಿನ ಬಳಕೆಯ ರಹಸ್ಯ. ಕವಿರಾಜಮಾರ್ಗಕಾರನ ಕಾಲಕ್ಕಿಂತಲೂ ಬಹು ಪ್ರಾಚೀನ ಕಾಲದಲ್ಲಿ ಜನಪದ ಕಾವ್ಯಪ್ರಕಾರಗಳಾಗಿದ್ದ ಚತ್ತಾಣ

ಬೆದಂಡೆಗಳ ಲಕ್ಷಣಗಳನ್ನು ಕುರಿತು ಇಡೀ ಕನ್ನಡ ಸಾಹಿತ್ಯದ ಉಪಲಬ್ಧ ಕೃತಿಗಳಲ್ಲಿ ಮೊತ್ತಮೊದಲಿನದಾದ ತನ್ನ ಅಲಂಕಾರಲಕ್ಷಣಗ್ರಂಥದ ಮೊದಲ ಪರಿಚ್ಛೇದದಲ್ಲಿಯೇ ನೃಪತುಂಗನು ಒಂಬತ್ತನೆ ಶತಮಾನದಲ್ಲಿಯೂ, ಇಮ್ಮಡಿ ನಾಗವರ್ಮನು ಹನ್ನೆರಡನೆ ಶತಮಾನದ ಉತ್ತರಾರ್ಧದಿಂದ ಹದಿಮೂರನೆ ಶತಮಾನದ ಮೂರೂವರೆದಶಕಗಳ ಅವಧಿಯಲ್ಲಿ ತನ್ನ ಕಾವ್ಯಾವಲೋಕನ ಗ್ರಂಥಾಂತ್ಯದ ಪದ್ಯಗಳಲ್ಲಿಯೂ ನಿರೂಪಿಸಿರುವುದನ್ನು ಕಾಣಬಹುದು. ಆ ಎಲ್ಲ ಪದ್ಯಗಳ ವಿವರಕ್ಕೆ ಇಲ್ಲಿ ಕೈಹಾಕದೆ ಆತನ ಮುಂದಿನ ಕಂದದ ಅಂತರಾರ್ಥವನ್ನು ಮಾತ್ರ ಮನಗಾಣೋಣ :

ನುಡಿಗೆಲ್ಲಿಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ
ಗಡಿನ ನೆಗಟ್ತಿಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನಕವಿಗಳ್ || ಕ. ರಾ. ಮಾ. ೧–೩೩||

ಬಿಡಿನುಡಿಗಳ ಈ ಕಂದದಲ್ಲಿನ ಪದಗಳನ್ನು 'ನುಡಿಗೆಲ್ಲಂ ಸಲ್ಲದ ಕನ್ನಡದೊಳ್' ಎಂದಾಗಲಿ, 'ನುಡಿಗೆಲ್ಲಂ ಸಲ್ಲುವ ಕನ್ನಡದೊಳ್' ಎಂದು ಮಾಡುವ ಪದಗಳ ಅನ್ವಯವು ಅತಿವ್ಯಾಪ್ತಿಯ ದೋಷಕ್ಕೆ ಗುರಿಯಾಗುವುದು. ಆ ಕಾರಣ ಬೇರೊಂದು ಬಗೆಯ ಅನ್ವಯ ಕ್ರಮದಿಂದ ಕೂಡಿಸಿ ಬಳಿಕ ಅರ್ಥೈಸುವುದು ಸೂಕ್ತವೆನಿಸುತ್ತದೆ. 'ಕನ್ನಡದೊಳ್ ಎಲ್ಲಂನುಡಿಗೆ, ಚತ್ತಾಣಮುಂ ಬೆದಂಡೆಯುಂ, ಸಲ್ಲದ ಎಂದು, ಈಗಳಿನ ನೆಗಟ್ತಿಯ ಕಬ್ಬದೊಳ್ ಪುರಾತನಕವಿಗಳ್ ಒಡಂಬಡಂ ಮಾಡಿದರ್'. ಹೀಗೆ ಪದಗಳನ್ನು ಅನ್ವಯಿಸಿಕೊಂಡಾಗ ಆಗುವ ಅರ್ಥವಿದು : 'ಕನ್ನಡದೊಳ್–ಕರ್ಣಾಟಕದಲ್ಲಿ, ಕನ್ನಡದೊಳ್ ಭಾವಿಸಿದಜನಪದದಲ್ಲಿ, ಕನ್ನಡ ಭಾಷೆಯಲ್ಲಿ, ಎಲ್ಲಂನುಡಿಗೆ–ಎಲ್ಲರ ಆಡುನುಡಿಗೆ, ಮಾತಿನ ರೀತಿಗೆ, ಚತ್ತಾಣಮುಂ ಬೆದಂಡೆಯುಂ--ಚತ್ತಾಣ ಮತ್ತು ಬೆದಂಡೆಗಳೆಂಬ ದೇಸಿಗಬ್ಬಗಳ ನುಡಿವಳಿಯು, ಸಲ್ಲದ ಎಂದು--ಸರಿಹೊಂದದವು, ಹೊದ್ದುಗೆಯಾಗದವು ಎಂದು, ಪುರಾತನ ಕವಿಗಳ್-ಪ್ರಾಚೀನಕಾಲದ ಕವಿಗಳು/ಳೆ, ಈಗಡಿನ ನೆಗಟ್ತಿಯ ಕಬ್ಬದೊಳ್ --ಈಗಿನ ಕಾಲದಲ್ಲಿ ಪ್ರಸಿದ್ಧಿಗೆ ಬಂದಿರುವ ಕಾವ್ಯ (ಪ್ರಕಾರ)ಗಳಲ್ಲಿ ಒಡಂಬಡಂ ಮಾಡಿದರ್-- ಆ ದೇಸಿಗಬ್ಬಗಳ ಛಂದೋಗತ್ಯವಾದ ವಿವಿಧ ಬಂಧಗಳನ್ನು ಸ್ವೀಕರಿಸಿ, ರಚಿಸುವ ಮೂಲಕ ಮೆಚ್ಚುವಂತೆ ಮಾಡಿದರು.' ಎಂಬ ಈ ಅರ್ಥವನ್ನುಳ್ಳ ಕಂದಕ್ಕೆ ಪೋಷಕವಾಗಿರುವ ಮುಂದಿನ ಕವಿರಾಜಮಾರ್ಗದ ಕಂದಗಳು ಚತ್ತಾಣ ಬೆದಂಡೆಗಬ್ಬಗಳ ಸ್ವರೂಪವನ್ನೇ ಕುರಿತದ್ದಾಗಿವೆ.

ಕಂದಂಗಳ್ ಪಲವಾಗಿರೆ
ಸುಂದರ ವೃತ್ತಂಗಳಕ್ಕರಂ ಚೌಪದಿ ಮ
ತ್ತಂ ದಲ್ ಗೀತಿಕೆ ತಿವದಿಗ
ಳಂದಂಬೆತ್ತೆಸೆಯೆ ಪೇಟ್ವೊಡದು ಚತ್ತಾಣಂ ||

ಚತ್ತಾಣ ಇಲ್ಲವೆ ಚಿತ್ರಾಯತನವೆಂಬ ಕಾವ್ಯದ ಛಂದೋವೈವಿಧ್ಯವೇ ಆದರ ವೈಶಿಷ್ಟ್ಯ. ಕಂದಗಳು ಹಲವಿದ್ದು, ಸುಂದರವಾದ ವೃತ್ತಗಳು, ಅಂಶಗಣನಿಬದ್ಧವಾದ ಅಕ್ಕರ, ಚೌಪದಿ, ಗೀತಿಕೆ, ತ್ರಿಪದಿಗಳ ನಾನಾ ಲಯಗತಿಯ ಇಂಪಿನಿಂದ ಕೂಡಿ ಕಿವಿಗೆ ಸವಿಯುಣಿಸಿ ಕೇಳಿಬರುವ ಕಾವ್ಯ ಚತ್ತಾಣ. ಹಾಗೆಯೇ ಬೆದಂಡೆ (ವೈದಂಡಿಕಾ)ಯನ್ನು ಕುರಿತು ಮಾರ್ಗಕಾರನ ವರ್ಣನೆಯಿದು :

ಕಂದಮುಮಮಳಿನ ವೃತ್ತಮು
ಮೊಂದೊಂದೆಡೆಗೊಂದು ಜಾತಿ ಜಾಣಿಸೆಯೆ ಬೆಡಂ
ಗೊಂದಿಪಱಯೊಳಮರೆ ಪೇಳಿಲ್
ಸುಂದರ ರೂಪಿಂ ಬೆದಂಡೆಗಬ್ಬಮುದಕ್ಕುಂ ||

ಕಂದ, ವೃತ್ತ, ಒಂದೊಂದು, ಅಲ್ಲಲ್ಲಿ ನಡುವೆ ದೇಸಿಯ ಛಂದೋಗತಿಯ ಬೆಡಗಿನ ಜಾತಿ ಎಂದರೆ ದೇಸಿ 'ಪದ'ಗಳಿಂದ ಕೂಡಿ ಸುಂದರವಾದ ರೂಪುಳ್ಳ ಕೃತಿಯೆ ಬೆದಂಡೆಗಬ್ಬ.

ಪೂರ್ವೋಕ್ತ "ನುಡಿಗೆಲ್ಲಂ ಸಲ್ಲದ, ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದು" ಎಂಬೀ ಅಪೂರ್ಣ ವಾಕ್ಯದಲ್ಲಿ 'ನುಡಿಗೆಲ್ಲಂ ಸಲ್ಲದ' ಎಂಬುದರಲ್ಲಿನ 'ಎಲ್ಲಂ' ಪದದ ವಿವೇಚನೆ ಇಲ್ಲಿ ಪ್ರಸ್ತುತ. 'ಎಲ್ಲಂ' -- ಈ ಪದದ ಅಂತ್ಯದಲ್ಲಿನ ಬಿಂದು ರೇಫ ಪರ್ಯಾಯ ಪ್ರಯೋಗವೆಂದು ಅರಿತಾಗ 'ಎಲ್ಲರ್' ಎಂಬ ಅರ್ಥ ಸುಬೋಧವಾಗುತ್ತದೆ. 'ನುಡಿಗೆಲ್ಲಂ' ಎಂಬುದನ್ನು 'ಎಲ್ಲರ್‌ನುಡಿಗೆ' ಎಂದರೆ 'ಎಲ್ಲರ ನುಡಿಗೆ'-ಮಾತಿನ ರೀತಿಗೆ,' ಎಂಬ ಅನ್ವಯಾರ್ಥಕ್ಕನುಗುಣವಾಗಿ ಈ ಎರಡು ಪದಗಳನ್ನು ಕ್ರಮವರಿತು ಜೊತೆಗೂಡಿಸಿಕೊಳ್ಳಬೇಕಾಗುತ್ತದೆ. ಪೂರ್ವಕಾಲದ ಶಾಸನ ಹಾಗೂ ಕಾವ್ಯಗಳಲ್ಲಿ ರೇಫಪರ್ಯಾಯವಾಗಿ ಬಿಂದುವಿನ ಪ್ರಯೋಗವಿಲ್ಲದೆ ಇಲ್ಲ. ಉದಾಹರಣೆಗೆ :

1 "..............ಸಮೇರು ಸುಮಾನೋಪರ್ಮಂ ಸ್ಫುಟಂ ಗೊಂಮಟೇ
ಶ್ವರದೇವೋತ್ತಮಚಾರು ದಿವ್ಯಶಿರದೊಳ್ ದೇವರ್ಕಳಿಂದಾದುದಂ
ಧರೆಯೆಲ್ಲಂ ನೆಱೆ ಕಂಡುದಾ ಮಹಿಮೆಯಾ ದೇವಂಗದಾಶ್ಚರ್ಯಮೇ"

-----ಶ್ರವಣಬೆಳುಗೊಳದ 12ನೆಯ ಶತಮಾನದ ಶಿಲಾಶಾಸನ. E.C. II No336

2 'ಕರಿದುಚ್ಚಾಸನದಲ್ಲಿ ಕುಳ್ಳಿರಿಸಿ ಪೂಜಾಪೂರ್ವಕಂ ಕಾವ್ಯ ಸಾ
ಗರಮಂ ಪೊಯ್ಯೊಡಮಿನ್ನದೇಕೆ ನೆನೆಗುಂ ಮೂರ್ಖಂ ಮಹೋತ್ತುಂಗಮಂ
ದಿರಮಧ್ಯಸ್ಥಿತ ಪೀಠದೊಳ್ ನಿಱಿಸಿ ದೈವಂಮಾಡಿ ತೀರ್ಥಾಂಬುಮಂ
ಸುರಿದೆಲ್ಲಂ ಪೊಡಮಟ್ಟು ಪೂಜಿಸಿದೊಡಂ ಕಲ್ ಮೆಲ್ಲಿತೇನಾದುದೇ ?'—
ಆಕರ; ಲೀಲಾವತಿ ?

3 "ಉದಯಾದಿತ್ಯನೆ ಧನ್ಯನೆಂದು ಧರೆಯೆಲ್ಲಂ ಬಣ್ಣಿಪನ್ನಂ ಮನೋ
ಮುದಮುಂ ತಾಳ್ದಿದ ಕೂರ್ಮೆ ಪೆರ್ಮೆವಡೆವನ್ನಂ ಕರಂ ಪೆರ್ಚಿದೀ
ಚದುರುಂ ಜಾಣ್ಮೆಗುವನ್ನಲಂಕರಿಸಿದಂ ಚೆಲ್ವಾದಲಂಕಾರಸಾ
ರದೊಳಾ ಭಾರತಿಯುಂ ಪ್ರಸನ್ನ ಮತಿಯುಂ ಸಾಹಿತ್ಯವಿದ್ಯೋದಯಂ"ಉದ-
ಯಾದಿತ್ಯಾಲಂಕಾರಂ ೭೮
ಪದಮಧ್ಯದ ರೇಫಕ್ಕೆ ಪರ್ಯಾಯವಾಗಿ ಬಂದಿರುವ ಬಿಂದುವಿಗೆ ಉದಾ :

4 "ಅತುಂದು ಅಂತುದುವೆಂಬ ಶಬ್ದಂ"-- ಕೋಶ. ಮರ್ಕಟ>ಮಂಕಡ."

ಈ ಎಲ್ಲ ಉದಾಹರಣೆಗಳಿಂದ ಬಿಂದುವನ್ನು ಪದದ ಅಂತ್ಯದಲ್ಲಿ ಉಳ್ಳ 'ಎಲ್ಲ' ಎಂಬುದಕ್ಕೆ ಎಲ್ಲರ್ ಎಂಬ ಶಬ್ದರೂಪದಿಂದ ಅರ್ಥೈಸುವುದು ಆಗತ್ಯ, ಅಲ್ಲದೆ ಕ್ರಮಬದ್ಧ. 'ಬಿಂದು ರನುಸ್ವಾರೋತ್ತರ ಭಾವೀಧ್ವನಿಃ.' ಅನುಸ್ವಾರದ ಉಚ್ಚಾರಕ್ಕೂ ಮೀರಿನಿಂದ ನಾದ ಮಯ ಬಿಂದುವಿನ ಉಚ್ಚಾರವು ವಿಶಿಷ್ಟತರವಾದುದು. ಉಚ್ಚಾರಭೇದದಿಂದ ಬೇರೆ ಬೇರೆಯಾದುದರಿಂದ, "ಓದಿಸುವವರಿಗೆ ಅಸಾಧ್ಯ, ಅಲೇಖ ನಾದ-ಶೂನ್ಯಕಲ್ಲಿನೊಳಗಾದ ಕಾರಣ, ಈ ಬಿಂದು ಅಖಂಡವೆಂಬ ನಾಮಸೂಚನೆಯಾಗಿ ಆದಿಗೆ ಪ್ರಥಮನಾಮ ಸರ್ವಪ್ರಕೃತಿ-ಬೀಜ. ಸಚ್ಚಿದಾನಂದದ ಕಳೆ, ನಿತ್ಯಜ್ಞಾನಲಾಂಛನ. ಅಣುವಿಗೆ ಅಣು ಮಹತ್ತಿಂಗೆ ಮಹತ್ತು. ಈ ಬಿಂದುವಿನ ಲಿಪಿಸ್ವರೂಪ : Capital an O· Sun Shape letter· ಈ ಗೂಢ ಲಿಪಿಗೆ ಶೂನ್ಯಂ, ಸ್ವರ್ಣಂ, ಖಂ, ಸೊನ್ನೆ. ಅನುಸ್ವಾರ ವೆಂದು ಬೇರೆ ಬೇರೆ ಹೆಸರುಗಳು. ಪರಿಪೂರ್ಣತೆಯ ಸಾಂಕೇತಿಕ ಬಿಂದುರೇಖಕ. ಬಟ್ಟ ಬಯಲೆಂದು ಸ್ತುತ್ಯವಾದ ಈ ಬಿಂದು ತನ್ನ ರಹಸ್ಯವನ್ನು ಸುಲಭವಾಗಿ ಬಿಟ್ಟು ಕೊಡದು ಎಂಬುದಕ್ಕೆ "ನುಡಿಗೆಲ್ಲಂ ಸಲ್ಲದ' ಎಂಬ ಈ ಪೂರ್ವ ಕವಿಯ ಕಾವ್ಯದಲ್ಲಿನ ಪದಪ್ರಯೋಗದಿಂದ ಒಡ್ಡಿಬಂದ ಅರ್ಥಕ್ಲೇಶವೇ ಒಂದು ನಿದರ್ಶನ. ಇನ್ನು 'ಸಲ್ಲದ ಎಂಬ ಮಾತಿಗೆ ಹೆಚ್ಚು ವಿವರ ಅನಗತ್ಯ. ಒಪ್ಪಿಗೆಯಾಗದ, ಸರಿಹೋಗದ, ಹೊಂದ ದಂತಹ ಎಂಬುದು ಮೇಲುನೋಟಕ್ಕೇ ಕಾಣಬಂದದ್ದು. ಜನಬಳಕೆಯಲ್ಲಿ'ಅಲ್ಲ ಸಲ್ಲದ ಮಾತು' ಎಂಬುದು ಗಾದೆಮನೆಯ ಮಾತೂ ಆಗಿದೆಯಲ್ಲವೆ ? ಅರ್ಥ ಶಬ್ದರೂಪದ ನಾಂತ ಆ ಮಾಯಾನಿಧಿಯ ಮೋಡಿಯನ್ನು ಈ ನುಡಿಗಟ್ಟಿನಲ್ಲಿನ ಬಿಂದುವಿನಲ್ಲಿ ಕಾಣಬಹುದು.

ಸಿ. ಮಹಾದೇವಪ್ಪ.

# ಗ್ರಂಥಾವಲೋಕನ

**ಹೈಮವತೀ ಪರಿಣಯ :**

ಲೇಖಕರಾದ ಶ್ರೀ. ಆರ್ ಶಂಕರನಾರಾಯಣ್ ಅವರು ಸುಪ್ರಸಿದ್ಧರಾದ ಗಮಕಿಗಳು. ಬಹಳ ಕಾಲ ಸಾಹಿತ್ಯಾಭ್ಯಾಸವನ್ನು ಮಾಡಿ ಗಮಕ ಕಲೆಯ ಪ್ರಚಾರಕ್ಕಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ- ಗಮಕಕಲೆಗೆ ಪ್ರೋತ್ಸಾಹವನ್ನಿತ್ತು, ಕೆಲವು ಕೃತಿಗಳನ್ನು ರಚಿಸಿ, ಪ್ರಕಟಿಸಿ, ಸಾಹಿತ್ಯ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

ಗಮಕಕ್ಷೇತ್ರದಲ್ಲಿ ವಾಚನಕ್ಕೆ ಪ್ರಸಿದ್ಧವಾದವು- ಗದುಗಿನ ಭಾರತ, ಪಂಪರಾಮಾಯಣ, ಕುವೆಂಪು ರಾಮಾಯಣದರ್ಶನ ಮೊದಲಾದ ಕೆಲವು ಕಾವ್ಯಗಳು ಮಾತ್ರ. ಗಮಕಿಗಳು ಕನ್ನಡದೇಶದ ವಿವಿಧ ಸ್ಥಳಗಳಲ್ಲಿ ಇನ್ನು ಮತ್ತೆ ಮತ್ತೆ ವಾಚಿಸಿರುವುದರಿಂದ ಈ ಕಾವ್ಯಗಳು ಹಿರಿಯದಾದ ಹಳೆಯ ಸ್ಥಾನದಲ್ಲಿ ನಿಂತಿವೆ. ಪಂಪಭಾರತ, ಜಗನ್ನಾಥ ವಿಜಯ ಮೊದಲಾದ ಬೇರೆ ಬೇರೆ ಪ್ರಾಚೀನ ಕಾವ್ಯಗಳು ಕ್ಲಿಷ್ಟವಾದ್ದರಿಂದ ಗಮಕ ವಾಚನಕ್ಕೆ ಪ್ರಿಯವೆನಿಸಲಿಲ್ಲ. ವ್ಯಾಖ್ಯಾನಕಾರರಿಗೆ ಅವುಗಳ ಅರ್ಥವನ್ನು ವಿವರಿಸಿ ಹೇಳುವುದೂ ಕಷ್ಟವೆನಿಸಿತು. ವಿವರಿಸಿ ಹೇಳಿದರೂ ಆ ಮಹಾಕಾವ್ಯಗಳ ಅಲಂಕಾರ ಚಮತ್ಕಾರಗಳೂ ವಾಗ್ಧೋರಣೆಗಳೂ ಶ್ರೋತೃಗಳಿಗೆ ಒಲವನ್ನು ಉಂಟುಮಾಡದಿರುವ ಪ್ರಸಂಗಗಳು ಅಧಿಕವಾಗಿರುತ್ತವೆ. ಹೀಗಿರುವುದರಿಂದ ಗಮಕವಾಚನಕ್ಕೆ ಹಿತಕರವಾದ ನೂತನ ಕಾವ್ಯಗಳ ಆವಶ್ಯಕತೆ ಒದಗಿರುತ್ತದೆ. ಈ ದಿಶೆಯಲ್ಲಿ ಶ್ರೀಶಂಕರನಾರಾಯಣ್ ಅವರ ಪ್ರಯತ್ನ ಸ್ತುತ್ಯವಾದುದು. ಅವರ ಈ ಬಗೆಯ ಕೃತಿಗಳಲ್ಲಿ ಹೈಮವತೀ ಪರಿಣಯ ಈಚಿನದು.

ಹಿಮವಂತನ ಮಗಳಾದ ಪಾರ್ವತಿಯೇ ಹೈಮವತಿ. ಅವಳು ಈಶ್ವರನನ್ನು ಮದುವೆಯಾದ ಪ್ರಸಂಗವು ಇಲ್ಲಿ ವರ್ಣಿತವಾಗಿದೆ. ಹರಿಹರನ ಗಿರಿಜಾಕಲ್ಯಾಣ, ಕಾಳಿದಾಸನ ಕುಮಾರ ಸಂಭವ ಮುಂತಾದ ಕಾವ್ಯಗಳಲ್ಲಿ ಬಂದಿರುವ ಪುರಾಣ ಕಥೆ ಇದು. ಪ್ರೊ|| ಟಿ. ಕೇಶವ ಭಟ್ಟರು ಮೆಚ್ಚಿ ಬರೆದ ಮುನ್ನುಡಿಯಿಂದ ಭೂಷಿತವಾಗಿದೆ.

ದಕ್ಷಪ್ರಜಾಪತಿಯ ಮಗಳಾದ ದಾಕ್ಷಾಯಣಿ ಶಿವನ ಪತ್ನಿ. ಅವಳು ತನ್ನ ತಂದೆಯು ಮಾಡುತ್ತಿದ್ದ ಯಾಗಕ್ಕೆ ಕರೆಯದಿದ್ದರೂ ಹೋಗುತ್ತಾಳೆ. ಅಲ್ಲಿ ದಕ್ಷನು ಅವಳನ್ನು

---

ಪ್ರ : ಸತ್ಯಶ್ರೀಪ್ರಕಾಶನ, 67, ಐ. ಟಿ. ಐ. ಬಡಾವಣೆ, ವಿದ್ಯಾಪೀಠ, ಬನಶಂಕರಿ 3ನೇ ಹಂತ, ಬೆಂಗಳೂರು –560 085. ಪುಟ viii + 93. ಬೆಲೆ ರೂ. 25/–

ಮಾತಾಡಿಸದೆ ಉಪೇಕ್ಷಿಸಿದ್ದರಿಂದಲೂ ಶಿವನನ್ನು ನಿಂದಿಸಿದ್ದರಿಂದಲೂ ಕುಪಿತಳಾಗಿ ಯೋಗಾಗ್ನಿಯಲ್ಲಿ ದೇಹತ್ಯಾಗ ಮಾಡುತ್ತಾಳೆ. ಈ ವೃತ್ತಾಂತವನ್ನು ಕೇಳಿದ ಈಶ್ವರನು ತನ್ನ ಜಟೆಯನ್ನು ನೆಲಕ್ಕೆ ಅಪ್ಪಳಿಸಿದಾಗ ಹುಟ್ಟಿದ ವೀರಭದ್ರ ದಕ್ಷನನ್ನು ಕೊಂದು ಅವನ ಯಾಗವನ್ನು ನಾಶಮಾಡುತ್ತಾನೆ. ದಾಕ್ಷಾಯಣಿಯು ಹಿಮವಂತನ ಮಗಳಾಗಿ ಅವತರಿಸುತ್ತಾಳೆ. ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ ಮತ್ತೆ ಆತನನ್ನೆ ಮದುವೆಯಾಗುತ್ತಾಳೆ. ಇದಿಷ್ಟು ಕಥೆಯ ಸಾರಾಂಶ. ಹರಿಹರನೂ ಕಾಳಿದಾಸನೂ ಇದನ್ನು ವಿಸ್ತರಿಸಿ ಮಹಾಕಾವ್ಯವನ್ನಾಗಿ ರೂಪಿಸಿದ್ದಾರೆ. ಶ್ರೀಶಂಕರನಾರಾಯಣ್ ಅವರು ಈ ಕಥೆಯನ್ನು ಸಂಕ್ಷೇಪಿಸಿ ಸುಂದರವಾದ ವಾರ್ಧಕಷಟ್ಪದಿಗಳಲ್ಲಿ ಲಘುಕಾವ್ಯವನ್ನಾಗಿ ಪರಿವರ್ತಿಸಿದ್ದಾರೆ.

ಷಟ್ಪದಿ ಕವಿಗೆ ಸಹಜವಾಗಿ ಒಗ್ಗಿದೆ, ಬಗ್ಗಿದೆ. ಯಾವ ಶ್ರಮವೂ ಇಲ್ಲದ ರೀತಿಯಿಂದ ಈ ವೃತ್ತವನ್ನು ಹೆಣೆಯುವ ಸಾಮರ್ಥ್ಯ ಈ ಕವಿಗಿದೆ. ಭಕ್ತಿಯೇ ಇದರಲ್ಲಿ ಪ್ರಧಾನ ಭಾವವಾಗಿದ್ದು ರಸವಾಗಿ ಹೊಮ್ಮುತ್ತದೆ. ದೇವತೆಗಳು ಪರಮೇಶ್ವರನನ್ನು ಸ್ತುತಿಸುವ ಈ ಪದ್ಯವನ್ನು ನೋಡಿ.

ಓನ್ನಮೋ ಲೋಕೇಶ ಸರ್ವೇಶ ಭವನಾಶ
ಓನ್ನಮೋ ಗೌರೀಶ ಬಾಲಾರ್ಕ ಸಂಕಾಶ
ಓನ್ನಮೋ ಕೈಲಾಸ ವಾಸಾದ್ರಿಜೇಶಭೋ ವಾಸವಾದ್ಯಭ್ಯರ್ಚಿತ ।
ಓನ್ನಮೋ ತ್ರಿಪುರಾರಿ ಶಂಕರಾ ಸುರುಚಿರಾ
ಓನ್ನಮೋ ಮಾರಾರಿ ಶುಭಕರಾ ಶ್ರೀಕರಾ
ಓನ್ನಮೋ ನಮ ಎಂದು ತಲೆಬಾಗಿ ವಂದನಂಗೈದರಾ ದಿವಿಜರ್ಕಳು ॥

ಪದಶಯ್ಯೆಯೂ ಅನುಪ್ರಾಸವೂ ಲಲಿತ ಮನೋಹರವಾಗಿ ಹೊಂದಿಕೊಂಡಿವೆ. ವೀರಭದ್ರನ ಕೋಪಾವೇಶದ ಮಾತಿನಲ್ಲಿ ಕರ್ಕಶಬಂಧವು ಆತನ ಕೋಪವನ್ನು ಹೇಗೆ ಅಭಿವ್ಯಂಜಿಸುತ್ತದೆಯೆಂಬುದನ್ನೂ ಗಮನಿಸಬಹುದು–

ಅಟ್ಟಿಯಂ ಮುರಿದಿಟ್ಟು ಸುಟ್ಟು ಬೊಟ್ಟಿಡುವೆನಂ
ಮುಟ್ಟು ನಡುಪಟ್ಟಿಯಂ ತಿರುವಿ ಬಿಗಿದಿಟ್ಟು ಜಗ
ಜಟ್ಟಿಯಾಂ ಬಿಟ್ಟಿಟ್ಟು ತೋರೆನಗೆ ಕಟ್ಟಳೆಯದೇನೆನಲು ವೀರಭದ್ರ ।

ಸಾಹಿತ್ಯದ ಮರ್ಮವನ್ನರಿತು ರಚಿಸಿದ ಈ ಕಾವ್ಯವು ನಿಜವಾಗಿಯೂ ಗಮಕಿಗಳಿಗೆ ವಾಚಿಸಲು ಉಪಯುಕ್ತವಾಗಿದೆ. ದೀರ್ಘ ಸಮಾಸವಿಲ್ಲದ ವಾಗ್ರಚನೆಯು ಗಮಕದ ಓಘವನ್ನು ಎಲ್ಲಿಯೂ ತಡೆಯದೆ ಮುಂದಕ್ಕೆ ಹರಿಸುತ್ತದೆ. ಸರಳ ಪದಬಂಧವಿರುವುದರಿಂದ ಶ್ರೋತೃಗಳು ಸುಲಭವಾಗಿ ಅರ್ಥಮಾಡಿಕೊಂಡು ಆನಂದಿಸಬಹುದು. ಆದರೂ ಗ್ರಂಥಕರ್ತರು ಎಲ್ಲ ಪದ್ಯಗಳಿಗೂ ಸರಳಾನುವಾದವನ್ನು ಬರೆದು ಅರ್ಥಕೋಶವನ್ನು ಕೊಟ್ಟಿದ್ದಾರೆ. ನೈಮಿಷಾರಣ್ಯವೆಂಬ ಹೆಸರು ಬರಲು ಕಾರಣವನ್ನು ತಿಳಿಸಿದ್ದಾರೆ. ಗಮಕಕ್ಷೇತ್ರಕ್ಕೆ ಇದೊಂದು ಉತ್ತಮವಾದ ಕಾಣಿಕೆ.

ಈ ಗ್ರಂಥಕರ್ತರು ಕಥಾ ನಿರೂಪಣೆಗೆ ಗಿರಿಜಾಕಲ್ಯಾಣವನ್ನು ಆದರ್ಶವಾಗಿ ಆರಿಸಿಕೊಂಡಿದ್ದಾರೆಂದು ಹೇಳಬಹುದು. ಕುಮಾರ ಸಂಭವವನ್ನು ಅನುಸರಿಸಿದಂತೆ ತೋರುವುದಿಲ್ಲ. ಈ ಲಘುಕಾವ್ಯದಲ್ಲಿ ಓದುಗರಿಗೆ ತೋರುವ ಕೆಲವು ಲೋಪಗಳನ್ನೂ ತಿಳಿಸುವುದು ಅಯುಕ್ತವಾಗಲಾರದು. ಪ್ರತಿಯೊಂದು ಸಂದರ್ಭದಲ್ಲಿಯೂ ನಾರದರು ಪ್ರವೇಶ ಮಾಡುವುದು ಹಿತವೆನಿಸುವುದಿಲ್ಲ. ಪಾರ್ವತಿಯ ಪರಿಚಯವೂ ಶಿವನಿಗಿಲ್ಲದಾಗ, ಅವಳು ಇನ್ನೆಲ್ಲಿಯೋ ತಪಸ್ಸು ಮಾಡುತ್ತಿರುವಾಗ, ಮನ್ಮಥನು ಶಿವನ ಮೇಲೆ ಮೋಹನಾಸ್ತ್ರವನ್ನು ಪ್ರಯೋಗಿಸಿ ಸುಟ್ಟುಹೋಗುವುದರ ಔಚಿತ್ಯವೇನು ? ಗಂಡನನ್ನು ಕಳೆದುಕೊಂಡ ರತಿ ನಾರದರ ಮಾತಿನಂತೆ ಪಾರ್ವತಿಯ ಬಳಿಗೆ ಬರುತ್ತಾಳೆ. ಅವಳಿಗೆ ದೊರೆತ ಸಾಂತ್ವನವೇನು ? ಮನ್ಮಥನು ಬದುಕಿದನೆ ? – ಎಂಬ ಕಥಾವಸ್ತು ಬಿಟ್ಟುಹೋಗಿದೆ. ಹೀಗೆ ಅಲ್ಲಲ್ಲಿ ಕೆಲವು ನ್ಯೂನತೆಗಳು ಕಥೆಯ ಹಂದರದಲ್ಲಿ ಕಾಣಿಸುತ್ತವೆ. ಇವನ್ನು ಮುಂದಿನ ಮುದ್ರಣದಲ್ಲಿ ಪರಿಷ್ಕರಿಸಿಕೊಳ್ಳುವುದು ಉತ್ತಮ.

ಎಸ್. ರಂಗನಾಥ ಶರ್ಮಾ

## ಮುದ್ದಣ ಪದಪ್ರಯೋಗ ಕೋಶ (1996)

ಕನ್ನಡ ಸಾಹಿತ್ಯದಲ್ಲಿ ಮುದ್ದಣನ ಕೃತಿಗಳಿಗೆ ವಿಶೇಷ ಮಹತ್ತ್ವವಿದೆ. ಅವನ ಕೃತಿಗಳನ್ನು ಅಭ್ಯಾಸ ಮಾಡದಿರುವ ಸಾಹಿತ್ಯ ಪರಿಣತಿ ಅಪೂರ್ಣವೇ ಸರಿ. ಯಕ್ಷಗಾನವನ್ನು ರಾಗ ತಾಳ ಬದ್ಧವಾಗಿ ಕಲಿಯುವಲ್ಲಿ ಮುದ್ದಣನ 'ಕುಮಾರವಿಜಯ' ಪ್ರಸಂಗ ಅನಿವಾರ್ಯವಾಗುವುದು. ಆದುದರಿಂದಲೇ ಸು. 1940 ರ ವೇಳೆ ರಾಗ–ತಾಳ ಬದ್ಧವಾಗಿ ಯಕ್ಷಗಾನ ಹಾಡಲು ಕಲಿಯುತ್ತಾ ನಾನು 'ಕುಮಾರವಿಜಯ'ವನ್ನು ಹಾಡಲು ಗುರುಮುಖದಿಂದ ಅಭ್ಯಾಸ ಮಾಡಿದ್ದೆನು. ಅದನ್ನು ಹಾಡಲು ಕಲ್ತರೆ, ಮುದ್ದಣನ 'ರತ್ನಾವತೀ ಕಲ್ಯಾಣ' ಹಾಡುವುದು ಕಷ್ಟವೆನಿಸದು. ಮುಂದೆ ನಾನು ಮದ್ರಾಸ್ ವಿಶ್ವವಿದ್ಯಾಲಯದ ವಿದ್ವಾನ್ ಪರೀಕ್ಷೆಗೆ ಸಿದ್ಧನಾಗುತ್ತಿದ್ದಾಗ (1941–42) ಮುದ್ದಣನ ಅದ್ಭುತ ರಾಮಾಯಣ ಮತ್ತು 'ರಾಮಾಶ್ವಮೇಧ' ಗದ್ಯಕೃತಿಗಳು ಸಮಗ್ರವಾಗಿ ಪಠ್ಯಗಳಾಗಿದ್ದುವು. ಮುಂದೆ, ಕವಿ ಮುದ್ದಣನ 75 ನೇ ವರ್ಷದ ಸ್ಮಾರಕೋತ್ಸವದಲ್ಲಿ ( 1976 ರಲ್ಲಿ ) ಹೊರತಂದ 'ಮುದ್ದಣಪ್ರಶಸ್ತಿಗ್ರಂಥ'ದ ಸಂಪಾದಕನೂ ನಾನಾಗಿದ್ದೆ.

---

ಲೇಖಕರು : ಪ್ರೊ. ಜಿ. ವೆಂಕಟಸುಬ್ಬಯ್ಯ. ಪ್ರಕಾಶಕರು : ಕರ್ನಾಟಕ ಸಂಘ, ಪುತ್ತೂರು 574201. ಡ. ಕ. ಪುಟಗಳು : 260 (ಕ್ರೌನ್ 1/8) ಬೆಲೆ : ರೂ. 105–00.

ಈ ಕವಿಕೃತಿಗಳ ಹಿರಿಮೆಯನ್ನೂ ಕನ್ನಡಿಗರಿಗೆ ಇವನ್ನೊದಗಿಸುವ ಸ್ವಕರ್ತವ್ಯವನ್ನೂ ಅನುಲಕ್ಷಿಸಿ, ಕರ್ನಾಟಕ ಸರಕಾರದ ಕನ್ನಡ ಸಂಸ್ಕೃತಿ ನಿರ್ದೇಶನಾಲಯವು 'ಮುದ್ದಣ ಭಂಡಾರ' ಎಂಬ ಹೆಸರಿನಲ್ಲಿ ಎರಡು ಸಂಪುಟಗಳಾಗಿ ಮುದ್ದಣನ ಸಮಗ್ರ ಕೃತಿಗಳನ್ನು ಅನುವಾದ ಸಹಿತ 1987 ರಲ್ಲಿ ಪ್ರಕಾಶನಪಡಿಸಿ ಜನೋಪಕಾರ ಮಾಡಿದೆ. ಈ ಮುದ್ದಣ ಭಂಡಾರದ ಸಂಪಾದಕರು, ಇದೀಗ 'ಮುದ್ದಣ ಪದಪ್ರಯೋಗ ಕೋಶ' ವನ್ನೂ ರಚಿಸಿರುವ ಪ್ರೊ. ಜಿ. ವೆಂಕಟಸುಬ್ಬಯ್ಯನವರು.

ಮುದ್ದಣನ ಕುಮಾರವಿಜಯ (ಶೂರಪದ್ಮಾಸುರ ಕಾಳಗ), ರತ್ನಾವತೀ ಕಲ್ಯಾಣ (ದೃಢವರ್ಮನ ಕಾಳಗ, ಶ್ರೀರಾಮ ಪಟ್ಟಾಭಿಷೇಕ (ವಾರ್ಧಕ ಷಟ್ಪದಿ), ಅದ್ಭುತ ರಾಮಾಯಣ ಮತ್ತು ರಾಮಾಶ್ವಮೇಧ (ಇವೆರಡೂ ಗದ್ಯ ಕಾವ್ಯಗಳು) ಉಪ ಲಬ್ಧವಿದ್ದರೂ ಓದಿ ಅರ್ಥಮಾಡಲು ಮತ್ತು ಪಾಠಬೋಧಿಸಲು ಸಮರ್ಪಕವಾಗುವ ಕವಿಪದಪ್ರಯೋಗಕೋಶವೊಂದರ ಆವಶ್ಯಕತೆ ಎಂದಿನಿಂದಲೇ ಇದ್ದಿತು. ಅದರ ಪೂರೈಕೆ ಯನ್ನು ಪ್ರೊ. ಜಿ. ವೆಂಕಟಸುಬ್ಬಯ್ಯನವರು ಮಾಡಿ, ಕನ್ನಡಿಗರ ಕೃತಜ್ಞತಾ ಪಾತ್ರ ರಾಗಿದ್ದಾರೆ. ದ. ಕ. ಜಿಲ್ಲೆಯ ಪುತ್ತೂರು ಕರ್ನಾಟಕ ಸಂಘದವರು ಈ ಕೋಶವನ್ನು ಉತ್ತಮವಾಗಿ ಮುದ್ರಿಸಿ, ಪ್ರಕಾಶನಪಡಿಸಿರುವುದು ಅಭಿನಂದನೀಯವಾಗಿದೆ.

ಮುದ್ದಣನ ಕಾವ್ಯಗಳ ರಸಾಸ್ವಾದನೆಗೆ ಈ ಕೋಶ ಸಹಾಯಕವಾಗಬೇಕೆಂಬ ಉದ್ದೇಶದಿಂದ ಶಬ್ದನಿರ್ಮಾಣದಲ್ಲಿ ಮುದ್ದಣನು ತೋರಿರುವ ಕೌಶಲವನ್ನು ಸಂಪಾದಕರು ಮುಮ್ಮಾತಾಗಿ ನಿರೂಪಣೆ ಮಾಡಿದ್ದಾರೆ. ಪ್ರಸ್ತಾವನೆ – 1 ರಲ್ಲಿ ಮುದ್ದಣನ ಸಂಕ್ಷಿಪ್ತ ಜೀವನ ಪರಿಚಯುವಿದೆಯಲ್ಲದೆ, ಅವನ ಎರಡು ಯಕ್ಷಗಾನ ಕೃತಿಗಳ ಮತ್ತು ಶ್ರೀರಾಮ ಪಟ್ಟಾಭಿಷೇಕದ (ಈ ಪದ್ಯಕೃತಿಗಳ) ಸಮೀಕ್ಷೆಯನ್ನೂ ಕೊಡಲಾಗಿದೆ. ಪ್ರಸ್ತಾವನೆ– 2 ರಲ್ಲಿ 'ಅದ್ಭುತ ರಾಮಾಯಣ' ಕೃತಿಯ ವಿಶೇಷತೆಯನ್ನು ನಿರೂಪಿಸಿ, ಶಬ್ದರೂಪ ವಿಮರ್ಶಾತ್ಮಕವಾಗಿ ಹಾಗೂ ವಿಶೇಷಾಧ್ಯಯನಪೂರ್ವಕವಾಗಿ ರಾಮಾಶ್ವಮೇಧದ ಬಗೆಗೆ ಸಮೀಕ್ಷೆಯನ್ನು ಮಾಡಲಾಗಿದೆ. ಶಬ್ದಕೋಶ ರಚನೆಯಲ್ಲಿ ವಿಶೇಷ ಪರಿಣತರಾದ ಈ ಸಂಪಾದಕರು ಅನೇಕ ಸಹಾಯಕಗ್ರಂಥಗಳನ್ನೂ ಇಟ್ಟುಕೊಂಡು, ಪ್ರೌಢಿಮೆಯಿಂದ ಈ ಕೋಶರಚನೆಮಾಡಿರುವುದು ಮೆಚ್ಚತಕ್ಕದಾಗಿದೆ. ಅನುಬಂಧದಲ್ಲಿ 'ಮುದ್ದಣ ಮನೋರಮೆಯರ ಸಂವಾದದಲ್ಲಿ ಕಾಣುವ 'ಕಾವ್ಯ ವಿಮರ್ಶನ ಸಿದ್ಧಾಂತ'ವನ್ನು ಅನುವಾದಾತ್ಮಕ ಸಂವಾದರೂಪದಲ್ಲಿ ಕೊಡುತ್ತ ವಿಶೇಷವಿವರಣೆಗಳನ್ನು ನೀಡಲಾಗಿದೆ. 182 ಪುಟಗಳಷ್ಟಿರುವ ಕೋಶವಿತ್ತೆ ಸುಮಾರು 85 ಪುಟಗಳ ಕವಿಕೃತಿ ವಿವರಣೆ ಗಳಿಂದ ಸುಬೋಧವಾಗಿದೆ.

ಈ ಕೋಶದಲ್ಲಿ 4079 ಪದಪ್ರಯೋಗಗಳಿಗೆ ಅರ್ಥವಿದೆ. ಮುದ್ದಣನ ಪದ ಪ್ರಯೋಗವೆಂದರೆ – ಸಮಸಂಸ್ಕೃತ, ತದ್ಭವ, ದೇಸಿ ಎಂದು ಮೂರು ಬಗೆಯವು.

ಅವನ ದೇಸಿಯಲ್ಲಿ ಹವ್ಯಕ, ಕೋಟ ಗೌಡ ಜನವರ್ಗದ ಬಳಕೆಯ ಶಬ್ದಗಳು ಮಾತ್ರ ವಲ್ಲದೆ ತುಳುವಿನವೂ ಕೆಲವು ಸೇರಿವೆ. ಆದುದರಿಂದಲೇ ಬೇರೆ ಕಡೆಯವರಿಗೆ ಸಂದಿಗ್ಧ ವೆನಿಸುವ ಅನೇಕ ಪ್ರಯೋಗಗಳೂ ಇರುವುದು ಸಹಜ. ಉದಾ : 'ಕೊಡನ ಮಣಿ' ಎಂಬುದಕ್ಕೆ "ಘಟಸರ್ಪ" ಎಂಬುದೇ ಸರಿಯಾದ ಅರ್ಥವಾದರೂ ಈ ಕೋಶದಲ್ಲಿ 'ಕೊಡದೊಳಗಿರುವ ಸರ್ಪದ ಮರಿ' ಎಂದು ಅರ್ಥ ಕೊಡಲಾಗಿದೆ. ತುಳುವಿನಲ್ಲಿ 'ಮರಿ' ಎಂದರೆ 'ಸರ್ಪ' ಸರ್ಪದ ಮರಿಯನ್ನು 'ಮರಿಕಿನ್ನಿ' ಎನ್ನಬೇಕಾಗುವುದು. ಬೇರೆ ಕನ್ನಡ ಕವಿಗಳು ಈ ಅರ್ಥದಲ್ಲಿ 'ಮರಿ' ಶಬ್ದವನ್ನು ಪ್ರಯೋಗಿಸಿರುವುದು ಕಂಡುಬಂದಿಲ್ಲ. ಕನ್ನಡಿಗರಲ್ಲಿ ಅನೇಕರಿಗೆ ನಾಗೇಂದ್ರ, ನಾಗಪ್ಪ, ನಾಗಯ್ಯ, ನಾಗರಾಜ, ಆದಿಶೇಷಯ್ಯ, ಶೇಷಶಾಸ್ತ್ರಿ ಮುಂತಾಗಿ ಆದಿಶೇಷನ ಹೆಸರಿರುವಂತೆ ಹವ್ಯಕರಲ್ಲಿ 'ಮರಿಯಪ್ಪ' ಎಂಬ ಹೆಸರು ಆದಿಶೇಷನ ಪರ್ಯಾಯವಾಗಿರುವುದು ಕಂಡುಬರುತ್ತದೆ. ಹೆಡೆಬಿಚ್ಚುವ ಹಾವಾಗಿರುವ ಸರ್ಪನನ್ನು ದ. ಕ. ಜಿಲ್ಲೆಯ ಕಡೆ 'ನಾಗರ ಹಾವು' ಎನ್ನುವರು. ಹಳ್ಳಿಗಳಲ್ಲಿ ಅದನ್ನೇ 'ಮರಿಹಾವು' ಎಂದೂ ಹೇಳುವ ದೇಸಿಯಿದೆ. ಕ. ಸಾ. ಪರಿಷತ್ತಿನ ನಿಘಂಟಿನಲ್ಲಿ ರಾಮಾಶ್ವಮೇಧದ ಸಂದರ್ಭಗಾಣಿಸಿ 'ಮರಿ' ಶಬ್ದಕ್ಕೆ 'ಸರ್ಪ' ಎಂಬ ಅರ್ಥವನ್ನೇ ಕೊಡಲಾಗಿದೆ.

ಯಾವ ಶಬ್ದಕೋಶದಲ್ಲೇ ಆದರೂ ಸೇರಿಸಲು ಬಿಟ್ಟುಹೋದ ಶಬ್ದಗಳಿರುವುದೇನೂ ಅವಾಸ್ತವಿಕವಲ್ಲ. ಆ ಮಾತು ಇಲ್ಲಿಗೂ ಅನ್ವಿತವೇ ಅಗಿದೆ. ರಾಮಾಶ್ವಮೇಧದ ಮೊದಲ ವಾಕ್ಯದಲ್ಲಿರುವ ಅಣಂ, ಗಡ ಎಂಬ ಶಬ್ದಗಳಿಗೆ ಈ ಕೋಶದಲ್ಲಿ ಅರ್ಥ ಕೊಟ್ಟಿಲ್ಲ. 'ಅಣಂ' ಎಂದರೆ ಸ್ವಲ್ಪವೂ 'ಗಡ ಗಳಂ ಗಳವು ಉಪಚಿತ ವಾರ್ತೆಯೊಳಮುಚಿತ ಸಂಭಾಷಣೆಯೊಳ್' ಎಂಬುದು ಶ. ದ. ವ್ಯಾಕರಣ ಸೂತ್ರ. ಅದರಂತೆ 'ಗಡ' ಎಂಬುದನ್ನು ಅಂತೆ, ಅಲ್ಲವೆ? ಎಂಬರ್ಥಗಳಲ್ಲಿ ಈ ಅವ್ಯಯಗಳ ಬಳಕೆಯಿದೆ. ಹವ್ಯಕರಲ್ಲಿ ಇದು ಅಡ ಅಥವಾ ಅಡೊ ಎಂಬ ರೂಪದಲ್ಲಿ ವ್ಯವಹಾರದಲ್ಲಿದೆ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟರು ತಮ್ಮ ಅನುವಾದದಲ್ಲಿ 'ಅಂತೆ' ಎಂದು ಪ್ರಯೋಗಿಸಿರುವವರು.

ಈ ಕೋಶದಲ್ಲಿ ಒಂದೇ ಅರ್ಥದ ಶಬ್ದವನ್ನೆ ಎರಡು ಬಾರಿ ಶಬ್ದವನ್ನೂ ಅರ್ಥವನ್ನೂ ಕೊಟ್ಟಿರುವುದೂ ಕಾಣುತ್ತದೆ. ಉದಾ : ಕರ್ವು, ಬಾಸಣಿಸು, ಸೋವು. 'ಅಂಗಜಾರಿ' ಎಂಬುದಕ್ಕೆ ಮನ್ಮಥನನ್ನು ಸುಟ್ಟವನು, ಎಂದು ಅರ್ಥ ಕೊಡಲಾಗಿದೆ. ಅವಯವಾರ್ಥಕ್ಕೆ ತಕ್ಕಂತೆ 'ಮನ್ಮಥನ ವೈರಿ' ಎಂದು ಕೊಡಬೇಕಿತ್ತು. ಕೋಶದಲ್ಲಿ ಸೇರಲು ಬಿಟ್ಟು ಹೋದವುಗಳಲ್ಲಿ ಕೆಲವಿವು—ಅನಿತು, ಅರೆಬರ್, ಎಡಗೆ, ಬಳಿಯಂ, ಪೆರತು, ಅಜಿರ್ಲ್, ಅನ್ಹೋಡಿಸು, ಕರ್ವೊನ್, ಜಾಂಬೂನದ, ಉಪೋಷ್ಣ ಇತ್ಯಾದಿ. "ಈ ಮುದ್ದಣ ಪದಪ್ರಯೋಗ ಕೋಶದಲ್ಲಿ ಮುದ್ದಣನು ಉಪಯೋಗಿಸಿರುವ ಶಬ್ದಗಳಿಗೆ ಅವನ ಗ್ರಂಥಗಳಲ್ಲಿ ಕಂಡುಬರುವ ಅರ್ಥಗಳನ್ನು ಮಾತ್ರ ಸೂಚಿಸಲಾಗಿದೆ.

ಇತರ ಅರ್ಥಗಳನ್ನು ನೀಡಿಲ್ಲ" ಎಂದು ಲೇಖಕರ ಮಾತಿದೆ. ಇದಕ್ಕೆ ಅಪವಾದವಾಗಿ 'ಆವೆಯಾದೊಡಮೇವರ'' ಎಂಬುದಕ್ಕೆ ಕೊಟ್ಟಿರುವ ಮೊದಲನೆಯ ಅರ್ಥ ಸರಿಯಿದೆ. ಎರಡನೆಯದು ಮುದ್ದಣನ ಪ್ರಯೋಗಕ್ಕೆ ಅನ್ವಯಿಸುವುದಿಲ್ಲ.

ಹೀಗೆ ಸಣ್ಣ ಪುಟ್ಟ ದೋಷಗಳು ಈ ಕೋಶದಲ್ಲಿ ತೀರಾ ಕಡಮೆಯೆಂದೇ ಹೇಳಬಹುದಾಗಿದೆ, ಇಂತಹದೊಂದು ಸಹಾಯಕ ಗ್ರಂಥವನ್ನು ಮುದ್ದಣ ಕೃತಿಪಾಠಕರಿಗಾಗಿ ಒದಗಿಸಿರುವ ಗ್ರಂಥಕರ್ತರಿಗೆ ನಾವೆಲ್ಲ ಋಣಿಗಳೇ ಸರಿ. ಗ್ರಂಥಾಭ್ಯಾಸದಲ್ಲಿ ಮುದ್ದಣನ ಕೃತಿಗಳಿಗಿರುವ ಮಹತ್ವವೂ ಅನಿವಾರ್ಯತೆಯೂ ಅವನ ಈ ಪದಪ್ರಯೋಗ ಕೋಶಕ್ಕೂ ಸಲ್ಲುವುದರಲ್ಲಿ ಸಂದೇಹವಿಲ್ಲ.

ಟಿ. ಕೇಶವ ಭಟ್ಟ

## ರಾಮಾಯಣ ಉಪನ್ಯಾಸಗಳು (೧೯೯೬)

ಪ್ರಸಿದ್ಧ ಸಾಹಿತಿಯೂ, ನಿವೃತ್ತ ಹಿಂದೀ ಪಂಡಿತರೂ, ವಾಗ್ಮಿಯೂ, ಯಕ್ಷಗಾನ ಅರ್ಥಧಾರಿಯೂ ಆಗಿರುವ ಶ್ರೀ ಪೆರ್ಲ ಕೃಷ್ಣಭಟ್ಟರು ಪುತ್ತೂರು ಕರ್ನಾಟಕ ಸಂಘದ ಆಶ್ರಯದಲ್ಲಿ ಮಾಡಿದ ಉಪನ್ಯಾಸಗಳ ಸಂಕಲನವಿದು. ಸಾಹಿತ್ಯ ಕಲಾಸಕ್ತರಾಗಿದ್ದ ದಿವಂಗತ ಅರ್ತಿಕಜೆ ಶಂಭಟ್ಟರ ನೆನಪಿನಲ್ಲಿ ತಿಂಗಳಿಗೊಂದರಂತೆ ಒಂದು ವರ್ಷ ಕಾಲ ರಾಮಾಯಣ ಪ್ರವಚನವನ್ನೇರ್ಪಡಿಸಲು ಅವರ ಮಕ್ಕಳಾದ ಪ್ರೊ|| ವಿ. ಬಿ. ಅರ್ತಿಕಜೆ ಹಾಗೂ ಅವರ ಸೋದರರು ಒಂದಾಗಿ ಮಾಡಿದ ಯೋಜನೆಯಂತೆ 1995 ಮಾರ್ಚ್ ತಿಂಗಳಿಂದ 1996 ಫೆಬ್ರವರಿತನಕ ಈ ಹನ್ನೆರಡು ಉಪನ್ಯಾಸಗಳು ಕಾರ್ಯಗತವಾದುದಾಗಿ ತಿಳಿದುಬರುತ್ತದೆ.

ಈ ಉಪನ್ಯಾಸಗಳಲ್ಲಿ ಮೊದಲಿನದು ಭಾರತೀಯ ಸಂಸ್ಕೃತಿಯನ್ನು ಕುರಿತಾಗಿದೆ. ವೈದಿಕ ಸಂಸ್ಕೃತಿ–ಭಾರತೀಯ ಸಂಸ್ಕೃತಿ, ಸಂಸ್ಕೃತಿಯ ಪ್ರಧಾನ ಅಂಗಗಳು, ದೈವಶ್ರದ್ಧೆ, ಧರ್ಮಪಾಲನೆ, ಶೀಲ, ಸದಾಚಾರ, ಪಾತಿವ್ರತ್ಯ, ಏಕಪತ್ನೀವ್ರತ, ವಚನಪಾಲನೆ, ಅತಿಥಿ ಸತ್ಕಾರ, ಸ್ವಾಮಿನಿಷ್ಠೆ, ದೈವೀಸಂಪತ್ತಿನ ವರ್ಧನೆ, ಆಸುರೀ ಭಾವಗಳ ದಮನ, ಸ್ತ್ರೀಯರ ಸ್ಥಾನ–ಗೌರವ, ಸಮಾಜದಲ್ಲಿ ದೊಡ್ಡವರು ಯಾರು, ಪೂಜ್ಯರು ಯಾರು ?

---

ಉಪನ್ಯಾಸಕರು ಮತ್ತು ಲೇಖಕರು : ಪೆರ್ಲ ಕೃಷ್ಣಭಟ್ಟ. ಪ್ರಕಾಶಕರು : ಕರ್ನಾಟಕ ಸಂಘ, ಪುತ್ತೂರು-574201, ದ. ಕ. ಪುಟಗಳು- 132(ಡೆಮ್ಮಿ 1/8), ಬೆಲೆ : ರೂ. 45-00

ಎಂಬುದನ್ನು ಈ ಪ್ರಥಮ ಉಪನ್ಯಾಸದಲ್ಲಿ ಸಮರ್ಪಕವಾಗಿ ಚರ್ಚಿಸಲಾಗಿದೆ. ಧರ್ಮ ಮತ್ತು ಮತ ಒಂದೇ ಅಲ್ಲ. ಧರ್ಮವು ರಿಲೀಜನ್ ಅಲ್ಲ. 'ರಾಜನೀತಿಯಲ್ಲಿ ಧರ್ಮ ಇರ ಬಾರದು, ವ್ಯಾಪಾರದಲ್ಲಿ ಧರ್ಮ ಬೇಕಿಲ್ಲ' ಮುಂತಾದುದನ್ನು ಅಬದ್ಧ ಪ್ರಯೋಗವೆಂದು ದೃಢಪಡಿಸಲಾಗಿದೆ. ವೈದಿಕ ಸಂಸ್ಕೃತಿಯಲ್ಲಿ ಜ್ಞಾನಿಗಳೂ ಸದಾಚಾರ ಸಂಪನ್ನರೂ ಆದ ಸಜ್ಜನರಿಗೆ ಅಗ್ರಪೀಠವನ್ನಿತ್ತು ಗೌರವಿಸಲಾಗುತ್ತಿತ್ತೆಂಬುದನ್ನು ವಿಶದಪಡಿಸಲಾಗಿದೆ.

ಮುಂದಿನ ಮೂರು ಉಪನ್ಯಾಸಗಳೂ ಶ್ರೀರಾಮನ ಪಾತ್ರಚಿತ್ರಣವುಳ್ಳವಾಗಿವೆ. ಉಪನ್ಯಾಸಕರು ವಾಲ್ಮೀಕಿ ರಾಮಾಯಣವನ್ನು ಮಾತ್ರವೇ ಆಧಾರವಾಗಿಟ್ಟು ಕೊಂಡು ಈ ಉಪನ್ಯಾಸಗಳನ್ನು ಮಾಡಿರುತ್ತಾರೆ. ಅನುಚಿತವೆನಿಸಿದ ಸೇರ್ಪಡೆಗಳನ್ನು ಅಲ್ಲಲ್ಲಿ ಖಂಡಿಸಿರುತ್ತಾರೆ. ತಮ್ಮ ನಿರೂಪಣೆಯ ಸಮರ್ಥನೆಗಾಗಿ ಅಲ್ಲಲ್ಲಿ ಶ್ಲೋಕಗಳನ್ನು ಉದ್ಧರಿಸಿ, ವಿವರಣೆ ನೀಡಿರುತ್ತಾರೆ. ರಾಮನನ್ನು ಓರ್ವ ಆದರ್ಶ ಮಾನವನೆಂಬಂತೆ ವಾಲ್ಮೀಕಿ ಚಿತ್ರಿಸಿರುವುದನ್ನೇ ಇಲ್ಲಿ ರುಜುಪಡಿಸಲಾಗಿದೆ. ಜಾಬಾಲಿಯ ನಾಸ್ತಿಕ ವಾದವನ್ನು ರಾಮನು ಖಂಡಿಸಿದ ಬಗೆ ಕುತೂಹಲಕರವಾಗಿಯೇ ಇದೆ. ಶ್ರೀರಾಮನ ರಾಜಧರ್ಮದ ವಿವರಣೆ ಮನೋಜ್ಞವಾಗಿದೆ. ವಾಲಿ ವಧೆ, ಅಗ್ನಿಪರೀಕ್ಷೆ, ಸೀತಾ ಪರಿತ್ಯಾಗ ಹಾಗೂ ಜೀವನಾದರ್ಶ–ಇವೆಲ್ಲವೂ ಮನನೀಯವಾಗಿವೆ.

ಉಪನ್ಯಾಸ ೫, ೬– ಲಕ್ಷ್ಮಣನನ್ನು ಕುರಿತಾಗಿರುತ್ತದೆ. ಈ ಮರ್ತ್ಯಲೋಕ ದಲ್ಲಿ ಸೀತೆಯಂತಹ ಸ್ತ್ರೀಯರು, ಹುಡುಕಿದರೆ ಕಾಣಸಿಗಬಹುದು ; ಆದರೆ ಸಂದರ್ಭಕ್ಕೆ ತಕ್ಕಂತೆ ತಮ್ಮನಾಗಿ, ಮಂತ್ರಿಯಾಗಿ, ಸೇವಕನಾಗಿ, ರಕ್ಷಕನಾಗಿ ಲಕ್ಷ್ಮಣನಂತಹ ವ್ಯಕ್ತಿ ಸಿಗುವುದು ದುರ್ಲಭವೆಂದು ರಾಮನೇ ಹೇಳಿದುದನ್ನು ಪ್ರಸ್ತಾವಿಸಿ ಅವನ ವೈಶಿಷ್ಟ್ಯವನ್ನಿಲ್ಲಿ ವಿವರಿಸಲಾಗಿದೆ. ವನವಾಸಕ್ಕೆ ಹೊರಟ ಲಕ್ಷ್ಮಣನಿಗೆ ಸುಮಿತ್ರೆಯು ಹರಸುತ್ತ ಹೇಳಿದ ಮಾತಿನ ಶ್ಲೋಕಕ್ಕೆ ಹೇಗೆ ಮೂರು ಬಗೆಯಾಗಿ ಅರ್ಥವಾಗುವು ದೆಂಬುದನ್ನು ಇಲ್ಲಿ ವಿವರಿಸಲಾಗಿದೆ. ಹೀಗೆಯೇ ಬೇರೆ ಬೇರೆ ಸಂದರ್ಭಗಳಲ್ಲಿ ಲಕ್ಷ್ಮಣನ ಪಾತ್ರ ಹೇಗೆ ಅಸಾಮಾನ್ಯವಾಗಿದೆಯೆಂಬ ವಿವರ ಇಲ್ಲಿದೆ.

ಮುಂದಿನ ಉಪನ್ಯಾಸಗಳಲ್ಲಿ ಕ್ರಮವಾಗಿ ಭರತ, (ಎರಡು ಉಪನ್ಯಾಸಗಳಲ್ಲಿ) ಹನುಮಂತ, ರಾವಣ ಎಂಬವರ ಪಾತ್ರ ಚಿತ್ರಣಗಳಿವೆ. ಹತ್ತನೆಯ ಉಪನ್ಯಾಸದಲ್ಲೇ ಸೀತೆಯ ಪಾತ್ರಚಿತ್ರಣವನ್ನು ತೊಡಗಿ, ಹನ್ನೆರಡನೆಯ ಉಪನ್ಯಾಸದಲ್ಲಿ ಪೂರ್ಣ ಗೊಳಿಸಲಾಗಿದೆ. ಪ್ರಪಂಚದ ಯಾವುದೇ ಸಾಹಿತ್ಯದಲ್ಲಿ ಸೀತೆಯಂತಹ ಸ್ತ್ರೀ ಪಾತ್ರ ಕಾಣಸಿಗದು. ಅಂತಹ ಸಕಲ ಸದ್ಗುಣಗಳೂ ಆಕೆಯಲ್ಲಿದ್ದವೆಂಬುದನ್ನು ಎಳೆಯೆಳೆಯಾಗಿ ಈ ಉಪನ್ಯಾಸಗಳಲ್ಲಿ ವಿವರಿಸಲಾಗಿದೆ. ಆಕೆ ರಸಾತಲ ಪ್ರವೇಶ ಮಾಡುವಲ್ಲಿವರೆಗೆ

ಕಥಾವಿಸ್ತಾರವನ್ನು ಹಾಗೂ ಅಲ್ಲಲ್ಲಿ ವ್ಯಕ್ತವಾಗುವ ವೈಶಿಷ್ಟ್ಯವನ್ನು ನಾವಿಲ್ಲಿ ಕಾಣಬಹುದು. ರಾಮಾಯಣವನ್ನು ಓದುವುದು, ಕೇಳುವುದು ಬರಿಯ ಕತೆಗಾಗಿ ಅಲ್ಲ. ಕತೆಗಾಗಿಯೇ ಪರಿಶೀಲಿಸಿದರೂ ಸ್ವಾರಸ್ಯವೇನೋ ಇದ್ದೇ ಇದೆ. ಅದಕ್ಕಿಂತ ಮಿಗಿಲಾಗಿ, ನಮ್ಮ ಬದುಕನ್ನು ತಿದ್ದಿ ಉದಾತ್ತವಾಗಿ ಬಾಳಲು ನಮಗೆ ಸಾಕಷ್ಟು ಪ್ರೇರಣೆ ಈ ಉಪನ್ಯಾಸ ಪಠನದಿಂದ ಆಗುವುದರಲ್ಲಿ ಸಂಶಯವಿಲ್ಲ. ಪ್ರತಿಯೊಬ್ಬರೂ ಸಂಗ್ರಹಿಸಿ ಇಟ್ಟುಕೊಳ್ಳಬೇಕಾದ ಮಹತ್ವದ ಕೃತಿ ಇದಾಗಿದೆ.

ಟಿ. ಕೇಶವ ಭಟ್ಟ.

— ೦ —

# ಪ್ರತಿಷ್ಠಾನ ವಾರ್ತೆ

---

೧) ಬಿ. ಎಂ. ಶ್ರೀ ಜಯಂತಿ : ಪ್ರತಿಮೆಗೆ ಮಾಲಾರ್ಪಣೆ

ಪ್ರತಿಷ್ಠಾನವು ಕನ್ನಡ ಶಕ್ತಿಕೇಂದ್ರದ ಸಹಯೋಗದೊಂದಿಗೆ 3-1-96 ರಂದು ಬಿ. ಎಂ. ಶ್ರೀ ಪ್ರತಿಮೆಗೆ ಮಾಲಾರ್ಪಣೆ ಸಮಾರಂಭವನ್ನು ಬಿ. ಎಂ. ಶ್ರೀ ವೃತ್ತ, ನ್ಯಾಷನಲ್ ಕಾಲೇಜು ಸಮೀಪ, ಬಸವನಗುಡಿಯಲ್ಲಿ ಏರ್ಪಡಿಸಿತ್ತು. ಶ್ರೀ ನಿಟ್ಟೂರು ಶ್ರೀನಿವಾಸರಾಯರು ಅಧ್ಯಕ್ಷತೆ ವಹಿಸಿದ್ದರು. ಪ್ರೊ|| ಎ. ಎನ್. ಮೂರ್ತಿರಾಯರು ಮಾಲಾರ್ಪಣೆ ಮಾಡಿದರು. ಶ್ರೀಮತಿ ಜಯಾ ಪಾರ್ಥಸಾರಥಿ ಅವರು ಬಿ. ಎಂ. ಶ್ರೀ ಗೀತಗಳನ್ನು ಸುಶ್ರಾವ್ಯವಾಗಿ ಹಾಡಿದರು. ಸ್ಥಳೀಯ ನಗರ ಪಾಲಿಕೆ ಸದಸ್ಯರಾದ ಶ್ರೀ ರಮೇಶ್ ಕುಮಾರ್ ಎಲ್ಲರಿಗೂ ಸಿಹಿ ಹಂಚಿದರು.

೨) ಸಹೃದಯ ಗೋಷ್ಠಿ :

6-1-96 ರಂದು ಶ್ರೀಮತಿ ಶ್ಯಾಮಲಾ ರತ್ನಕುಮಾರಿ. ಬಿ. ಎಸ್. ಅವರು "ರಾಷ್ಟ್ರಕೂಟ ರಾಜ್ಯಕ್ಕೆ ಸಂಬಂಧಿಸಿದಂತೆ–ಇತಿಹಾಸದಲ್ಲಿ ಸಂಶೋಧನೆ" ಎಂಬ ವಿಷಯವನ್ನು ಕುರಿತು ಉಪನ್ಯಾಸ ನೀಡಿದರು.

27-1-96 ರಂದು ಶ್ರೀ ಎಸ್. ವಿ. ಶ್ರೀನಾಥ್ ಮತ್ತು ಶ್ರೀಮತಿ. ಆರ್.ಎನ್ ಪರಿಮಳ ರಾವ್ ಅವರಿಂದ ಸ್ವರಚಿತ ಕವನ ವಾಚನ ಕಾರ್ಯಕ್ರಮವು ನಡೆಯಿತು.

೩) ಸಾಹಿತ್ಯೋಪಾಸಕರು, ವಿಶೇಷ ಕಾರ್ಯಕ್ರಮ ಮಾಲೆ

1. ಎ. ವಿ. ವರದಾಚಾರ್ಯ ಜೀವನ ಸಾಧನೆ : 2-3-96 ರಂದು ಗೋಖಲೆ ಸಾರ್ವಜನಿಕಸಂಸ್ಥೆಯ ಸಹಕಾರದೊಂದಿಗೆ ಈ ಮಾಲೆಯ 20ನೆಯ ಕಾರ್ಯಕ್ರಮವು ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ. ಬಿ. ವಿ. ವೈಕುಂಠರಾಜು, ಸಂಪಾದಕರು, ವಾರಪತ್ರಿಕೆ. ಅವರಿಂದ "ಎ. ವಿ. ವರದಾಚಾರ್ಯರ ಜೀವನ–ಸಾಧನೆ" ಕುರಿತು ವಿಚಾರಪೂರ್ಣ ಉಪನ್ಯಾಸವು ನಡೆಯಿತು.

2. **ಅಳಿಯಲಿಂಗರಾಜ ಮತ್ತು ದೇವಲಾಪುರದ ನಂಜುಂಡ: ವಿಚಾರ ಗೋಷ್ಠಿ** : ದಿನಾಂಕ 19-3-96 ರಂದು ಮೈಸೂರಿನಲ್ಲಿ ಕನ್ನಡ ಅಧ್ಯಯನ ಸಂಸ್ಥೆಯಸಹಯೋಗದೊಂದಿಗೆ ಈ ಕಾರ್ಯಕ್ರಮ ನಡೆಯಿತು. ಮೈಸೂರು ವಿಶ್ವವಿದ್ಯಾನಿಲಯದ ಕುಲ

ಪತಿಗಳಾದ ಡಾ|| ಎಂ. ಮಾದಯ್ಯ ಅವರು ಉದ್ಘಾಟನೆ ಮಾಡಿದ ಈ ಕಾರ್ಯಕ್ರಮಕ್ಕೆ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ|| ಕೆ. ಕೆಂಪೇಗೌಡ ಅವರು ಸ್ವಾಗತ ಮಾಡಿದರು. ಹಸ್ತಪ್ರತಿ ವಿಭಾಗದ ಸಂಪಾದಕರಾದ ಡಾ|| ಎಂ. ಪಿ. ಮಂಜಪ್ಪಶೆಟ್ಟಿಯವರು ಪ್ರಸ್ತಾವನೆ ಮಾಡಿದರು. ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾದ ಶ್ರೀ ಜಿ ಚನ್ನವೀರಸ್ವಾಮಿ ಅವರು ವಂದನಾರ್ಪಣೆ ಮಾಡಿದರು. ಮೊದಲಿಗೆ ಅಳಿಯ ಲಿಂಗರಾಜನನ್ನು ಕುರಿತು ನಡೆದ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರಸಿದ್ಧ ಸಾಹಿತಿಗಳೂ ವಿದ್ವಾಂಸರೂ ಆದ ಡಾ|| ಸಿ. ಪಿ. ಕೃಷ್ಣಕುಮಾರ್ ಅವರು ವಹಿಸಿದ್ದು ಅಳಿಯ ಲಿಂಗರಾಜನ ಇತರ ಕೃತಿಗಳು ಮತ್ತು ಕನ್ನಡ ಸಾಹಿತ್ಯದಲ್ಲಿ ಅಳಿಯ ಲಿಂಗರಾಜನ ಸ್ಥಾನ" ಎಂಬ ವಿಷಯವನ್ನು ಕುರಿತು ಉಪನ್ಯಾಸ ನೀಡಿದರು. ಡಾ|| ರಾಮೇಗೌಡರು ಅಳಿಯ ಲಿಂಗರಾಜ : ಇತಿ ವೃತ್ತಗಳು ಮತ್ತು ಕೃತಿಗಳು –ಈ ಕುರಿತು ಸಮೀಕ್ಷೆಯನ್ನೂ, ಶ್ರೀ ಬಿ. ಎಸ್ ಸಣ್ಣಯ್ಯನವರು 'ಚಂಪು, ಸಾಂಗತ್ಯ, ಷಟ್ಪದಿ ಕೃತಿಗಳು" ಮತ್ತು ಯಕ್ಷಗಾನ, ಶತಕ, ಹಾಡು, ಲಾವಣಿಗಳು" ಎಂಬ ವಿಷಯವನ್ನು ಕುರಿತು ಡಾ|| ಎಂ. ಪಿ. ಮಂಜಪ್ಪಸೆಟ್ಟಿ ಅವರು ವಿಚಾರಪೂರ್ಣ ಉಪನ್ಯಾಸಗಳನ್ನು ನೀಡಿದರು.

ಎರಡನೆಯ ವಿಚಾರಗೋಷ್ಠಿ "ದೇವಲಾಪುರದ ನಂಜುಂಡ" ಕವಿಯನ್ನು ಕುರಿತದ್ದು. ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದುದಲ್ಲದೆ ನಂಜುಂಡ ಕವಿಯ "ಇತರ ಕೃತಿಗಳು ಮತ್ತು ಕನ್ನಡ ಸಾಹಿತ್ಯದಲ್ಲಿ ದೇವಲಾಪುರದ ನಂಜುಂಡನ ಸ್ಥಾನ" ಕುರಿತು ಉಪನ್ಯಾಸವನ್ನು ನೀಡಿದರು ; "ಜೀವನ-ವ್ಯಕ್ತಿತ್ವ" ಕುರಿತು ಪ್ರೊ|| ಎನ್. ಬಸವಾರಾಧ್ಯ, "ಸಾಹಿತ್ಯ ಪ್ರಕಾರಗಳು" ಕುರಿತು ಶ್ರೀಮತಿ ವೈ. ಸಿ. ಭಾನುಮತಿ, "ಛಂದೋ ವೈವಿಧ್ಯ" ಕುರಿತು ಡಾ|| ಆರ್. ವಿ. ಎಸ್. ಸುಂದರಂ ಅವರೂ ರಸವತ್ತಾದ ಉಪನ್ಯಾಸಗಳನ್ನು ನೀಡಿದರು.

3. ವೆಂಕಟರಂಗೋಕಟ್ಟಿ : ಜೀವನ-ಸಾಧನೆ : ಈ ಮಾಲೆಯ 23 ನೆಯ ಕಾರ್ಯಕ್ರಮವು 29-4-96 ರಂದು ಗೋಖಲೆ ಸಂಸ್ಥೆಯ ಸಹಕಾರದೊಂದಿಗೆ ನಡೆಯಿತು. ಡಾ|| ಶ್ರೀನಿವಾಸ ಹಾವನೂರರು "ವೆಂಕಟ ರಂಗೋಕಟ್ಟಿ–ಜೀವನ ಸಾಧನೆ" ಕುರಿತು ಉಪನ್ಯಾಸ ನೀಡಿದರು.

4. "ಕೆರೂರು ವಾಸುದೇವಾಚಾರ್ಯರ– ಜೀವನ, ಸಾಧನೆ" : ಎಂಬ ವಿಷಯದ ಮೇಲೆ ಈ ಮಾಲೆಯ 24ನೆಯ ಕಾರ್ಯಕ್ರಮವು 29–5–96 ರಂದು ನಡೆಯಿತು. ಬೆಳ್ಳೂರಿನ ಶ್ರೀ. ಎಚ್. ಕೆ. ಸುರೇಶ್ ಅವರು ಉಪನ್ಯಾಸ ಮಾಡಿದರು.

೪) ಲೋಚನ ದಶವಾರ್ಷಿಕ ವಿಶೇಷ ಕಾರ್ಯಕ್ರಮ : ಅಂತರ ಶಿಸ್ತೀಯ ಸಂಶೋಧನ ವಿಧಿ ವಿಧಾನ ಉಪನ್ಯಾಸ ಮಾಲೆ : ನಮ್ಮ ಹೆಮ್ಮೆಯ ಪ್ರಕಟನೆಯಾದ ಕರ್ನಾಟಕ ಲೋಚನಕ್ಕೆ ಹತ್ತು ವರ್ಷ ತುಂಬಿದ ನೆನಪಿಗಾಗಿ 21-4-96ರಿಂದ 28-4-96ರವರೆಗೆ ವಿಶಿಷ್ಟ ಕಾರ್ಯಕ್ರಮವನ್ನು ಹಮ್ಮಿಕೊಂಡು ಅದನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಸಹಕಾರದೊಂದಿಗೆ, ಪರಿಷತ್ತಿನ ದುಂಡು ಮೇಜು ಸಭಾಂಗಣದಲ್ಲಿ ಯಶಸ್ವಿಯಾಗಿ ನಡೆಸಲಾಯಿತು. ಅನೇಕ ಹಿರಿಯ ಗಣ್ಯಸಾಹಿತಿಗಳೂ ವಿದ್ವಾಂಸರೂ ತಜ್ಞರೂ ಇದಕ್ಕೆ ತಮ್ಮ ಅಮೂಲ್ಯ ನೆರವು ನೀಡಿದರು. ಕಾರ್ಯಕ್ರಮದಲ್ಲಿ ಹಾಜರಿದ್ದ ವಿದ್ವಾಂಸರ, ಶಿಕ್ಷಕರ ಮನಸ್ಸನ್ನು ಹಿಡಿದಿಡುವಷ್ಟು ಉಪಯುಕ್ತವಾಗಿದ್ದು ಮೆಚ್ಚುಗೆಗೆ ಪಾತ್ರವಾಯಿತು.

ಈ ಉಪನ್ಯಾಸಮಾಲೆಯ ಉದ್ಘಾಟನೆಯನ್ನು 21-4-96ರಂದು ಗುಲ್ಬರ್ಗಾ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳಾದ ಡಾ || ಎನ್. ರುದ್ರಯ್ಯನವರು ನೆರವೇರಿಸಿಕೊಟ್ಟರು. "ಸಮಾಜ ಶಾಸ್ತ್ರ– ಸಮಾಜ ಕಾರ್ಯ" ಎಂಬ ವಿಷಯವನ್ನು ಕುರಿತು ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಸಮಾಜಕಾರ್ಯ ಪ್ರಾಧ್ಯಾಪಕರಾದ ಡಾ || ಎಚ್. ಎಂ. ಮರುಳಸಿದ್ಧಯ್ಯನವರು ಉಪನ್ಯಾಸ ನೀಡಿದರು. 22-4-96 ರಂದು "ಭಾಷಾವಿಜ್ಞಾನ" ಎಂಬ ವಿಷಯವನ್ನು ಕುರಿತು, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ || ಪರಮೇಶ್ವರ ಭಟ್ ಅವರೂ 23-4-96 ರಂದು "ಇತಿಹಾಸ" ಎಂಬುದರ ವಿಚಾರವಾಗಿ ಹೆಸರಾಂತ ಇತಿಹಾಸಜ್ಞ ಕರ್ನಾಟಕ ಗೆಜೆಟಿಯರ್‌ನ ನಿವೃತ್ತ ನಿರ್ದೇಶಕರೂ ಆದ ಡಾ || ಸೂರ್ಯನಾಥ ಕಾಮತ್ ಅವರೂ 24-4-96ರಂದು "ರಾಜ್ಯಶಾಸ್ತ್ರ" ಎಂಬ ವಿಷಯದ ಮೇಲೆ ಬೆಂಗಳೂರು ವಿಶ್ವವಿದ್ಯಾಲಯದ ರಾಜ್ಯಶಾಸ್ತ್ರ ಪ್ರಾಧ್ಯಾಪಕರಾದ ಡಾ || ಆರ್. ಎಲ್. ಎಂ. ಪಾಟೀಲ್ ಅವರೂ 25-4-96ರಂದು "ಸಾಹಿತ್ಯ" ಎಂಬ ವಿಷಯದ ಮೇಲೆ ಹೆಸರಾಂತ ಸಾಹಿತಿಗಳೂ ಬೊಂಬಾಯಿ ವಿಶ್ವವಿದ್ಯಾಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರೂ ಆದ ಡಾ|| ಶ್ರೀನಿವಾಸ ಹಾವನೂರ ಅವರೂ, 26-4-96ರಂದು ನಡೆದ ಕಾರ್ಯಕ್ರಮದಲ್ಲಿ "ಅರ್ಥಶಾಸ್ತ್ರ" ಎಂಬ ವಿಷಯವನ್ನು ಕುರಿತು ಸಾಮಾಜಿಕ–ಆರ್ಥಿಕ ಬದಲಾವಣೆ ಸಂಸ್ಥೆಯಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕರಾದ ಡಾ || ಅಬ್ದುಲ್ ಅಜೀಜ್ ಅವರೂ 27-4-96ರಂದು ನಡೆದ ಕಾರ್ಯಕ್ರಮದಲ್ಲಿ "ಮನೋ ವಿಜ್ಞಾನ" ಎಂಬ ವಿಷಯವನ್ನು ಕುರಿತು ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ || ಜಿ. ಮೋಹನ ಕುಮಾರ್ ಅವರೂ, ವಿಚಾರ ಪೂರ್ಣ ಭಾಷಣ ಮಾಡಿದರು.

28-4-96 ರಂದು ನಡೆದ ಸಮಾರೋಪ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರಸಿದ್ಧ ಸಾಹಿತಿಗಳೂ, ಸಂಶೋಧಕರೂ, ವಿದ್ವಾಂಸರೂ ಬೆಂಗಳೂರು ವಿಶ್ವ

ವಿದ್ಯಾಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರೂ ಆದ ಡಾ|| ಎಂ. ಚಿದಾನಂದ ಮೂರ್ತಿ ಅವರು ವಹಿಸಿದ್ದು ಕಾರ್ಯಕ್ರಮವನ್ನು ಸುಗಮವಾಗಿ ನೆರವೇರಿಸಿಕೊಟ್ಟರು. ಕೊನೆಯ ಉಪನ್ಯಾಸವಾಗಿ ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಶಿಕ್ಷಣ ಪ್ರಾಧ್ಯಾಪಕರಾದ ಡಾ || ಡಿ. ಎಸ್. ಶಿವಾನಂದ ಅವರು "ಸಂಖ್ಯಾ | ಜನಸಂಖ್ಯಾ ವಿಜ್ಞಾನ" ಎಂಬ ವಿಷಯವನ್ನು ಕುರಿತು ಮಾತನಾಡಿದರು, ಪ್ರತಿದಿನದ ಕಾರ್ಯಕ್ರಮದಲ್ಲಿಯೂ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ. ಎನ್. ಬಸವಾರಾಧ್ಯರು ಉಪನ್ಯಾಸಕರ ಪರಿಚಯ ಮತ್ತು ಅವರ ಸಾಹಿತ್ಯಕ ಹಾಗೂ ಇತರ ಕ್ಷೇತ್ರದ ಕೊಡುಗೆಗಳನ್ನು ನೆರೆದಿದ್ದವರಿಗೆ ಪರಿಚಯಿಸಿದರು. ಕಾರ್ಯದರ್ಶಿಗಳು ಮತ್ತು ಸಂಚಾಲಕರು ವಂದನಾರ್ಪಣೆ ಮಾಡಿದರು.

ಮುಂದೆ ಈ ಎಲ್ಲ ಉಪನ್ಯಾಸಗಳನ್ನೂ ಪುಸ್ತಕ ರೂಪದಲ್ಲಿ 'ಲೋಚನ ದಶವಾರ್ಷಿಕ ವಿಶೇಷಾಂಕ'ವಾಗಿ ಪ್ರಕಟಿಸುವ ಆಲೋಚನೆಯಿದೆ. ಇಂದಿನ ಸಂಶೋಧನೆ ಒಂದು ಶಿಸ್ತಿಗೆ ಸೀಮಿತವಾಗದೆ ಶಿಸ್ತು ಶಿಸ್ತುಗಳ ಗಡಿದಾಟ ಬೆಳೆಯುತ್ತಿರುವ ಹಿನ್ನೆಲೆಯಲ್ಲಿ ಅಂತರ ಶಿಸ್ತುಗಳ ಸಂಶೋಧನಾ ವಿಧಿ-ವಿಧಾನಗಳನ್ನು ಒಂದೇ ವೇದಿಕೆಯಲ್ಲಿ ಚರ್ಚೆಗೆ ತಂದು ವಿಚಾರ ವಿನಿಮಯಕ್ಕೆ ಅವಕಾಶ ಮಾಡಿಕೊಡುವ ಈ ಬಗೆಯ ಕಾರ್ಯಕ್ರಮಗಳಲ್ಲಿ ಇದೇ ಮೊದಲಿನದಾಗಿದೆ. ಇಂಥ ಉಪಯುಕ್ತ ಕಾರ್ಯಕ್ರಮವನ್ನು ಎಲ್ಲ ಉಪನ್ಯಾಸಕರೂ ಮತ್ತು ಭಾಗವಹಿಸಿದ್ದ ಸಂಶೋಧನಾಸಕ್ತರೂ ಮುಕ್ತಕಂಠದಿಂದ ಮೆಚ್ಚುಗೆ ಸೂಚಿಸಿದರು.

**ಆ) 1. ಬೇಟೆರಾಯ ದೀಕ್ಷಿತ ಸ್ಮಾರಕ ದತ್ತಿ ನಿಧಿಯ ಸ್ಥಾಪನೆ :**

ಪ್ರತಿಷ್ಠಾನದ ಹಿತೈಷಿಗಳೂ ಸಂಸ್ಥಾಪಕ ದಿ|| ಎಂ. ವಿ. ಸೀತಾರಾಮಯ್ಯನವರ ಸಹಪಾಠಿಗಳೂ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರೂ, ಹಿರಿಯ ಸಾಹಿತಿಗಳೂ ಆದ ಪ್ರೊ|| ಬಿ. ರಾಮಸ್ವಾಮಿ ಅವರು ಪ್ರತಿಷ್ಠಾನದಲ್ಲಿ ಮೇಲ್ಕಂಡ ದತ್ತಿ ನಿಧಿಯನ್ನು ಸ್ಥಾಪಿಸಿದ್ದಾರೆ. ಈ ಶತಮಾನದ ಆರಂಭ ಕಾಲದ ಪ್ರಸಿದ್ಧ ಸಂಸ್ಕೃತ ವಿದ್ವಾಂಸರೂ ರಾಮಾಯಣ ಪ್ರವಚನಕಾರರೂ ಕೀರ್ತನಕಾರರೂ ಆಗಿದ್ದ ಬೇಟೆರಾಯದೀಕ್ಷಿತರು ತುಮಕೂರು ಜಿಲ್ಲೆ ತುರುವೇಕೆರೆಯವರು ಮತ್ತು ಪ್ರೊ|| ರಾಮಸ್ವಾಮಿ ಅವರ ತಂದೆಯವರು. ದೀಕ್ಷಿತರಿಗೆ ಅತ್ಯಂತ ಪ್ರಿಯವಾಗಿದ್ದ ರಾಮಾಯಣವನ್ನು ಕುರಿತು ಪ್ರತಿವರ್ಷ ಒಂದೊಂದು ಉಪನ್ಯಾಸ ನಡೆಸುವುದು ಈ ದತ್ತಿನಿಧಿಯ ಉದ್ದೇಶವಾಗಿದೆ. ಈ ನಿಧಿಗಾಗಿ 3,000-00 ರೂಗಳನ್ನು "ಬೇಟೆರಾಯ ದೀಕ್ಷಿತರ ದೇವರ ನಾಮಗಳು ಮತ್ತು ಸಂಪ್ರದಾಯದ ಹಾಡುಗಳು" ಪುಸ್ತಕದ 850 ಪ್ರತಿಗಳನ್ನು ನೀಡಿದ್ದಾರೆ. ಈ ಕೃತಿಯನ್ನು ಪ್ರತಿಷ್ಠಾನದ ಮೂಲಕವೇ ಪ್ರಕಟಿಸಿ ಇದರ ಪೂರ್ಣಮುದ್ರಣ ವೆಚ್ಚವನ್ನು ರಾಮಸ್ವಾಮಿಗಳೇ ಭರಿಸಿದ್ದು ಇದರ ಮಾರಾಟದಿಂದ ಬರುವ ಹಣವನ್ನೂ ದತ್ತಿ ನಿಧಿಗೇ ಸೇರಿಸಲಾಗುವುದು.

2. ಎರಡು ಅಪ್ರಕಟಿತ ಕೃತಿಗಳ ಬಿಡುಗಡೆ :

ದಿನಾಂಕ 24-6-96 ರಂದು ಗಾಂಧಿ ಸಾಹಿತ್ಯ ಸಂಘದಲ್ಲಿ ಅವರ ಸಹಯೋಗದೊಂದಿಗೆ ನಡೆದ ಕಾರ್ಯಕ್ರಮದಲ್ಲಿ ಪ್ರಸಿದ್ಧ ಸಂಸ್ಕೃತ ವಿದ್ವಾಂಸರೂ ಶಿಕ್ಷಣ ತಜ್ಞರೂ ಆದ ಪ್ರೊ|| ಎಂ. ಪಿ. ಎಲ್. ಶಾಸ್ತ್ರೀ ಅವರು ಮೇಲಿನ ದತ್ತಿನಿಧಿಯನ್ನು ಉದ್ಘಾಟನೆ ಮಾಡಿ, ಬೇಟೆರಾಯ ದೀಕ್ಷಿತರ ಭಾವಚಿತ್ರವನ್ನು ಅನಾವರಣ ಮಾಡಿ ಪ್ರೊ|| ಬಿ. ರಾಮಸ್ವಾಮಿ ಅವರು ಸಂಪಾದಿಸಿರುವ ದೀಕ್ಷಿತರ ಅಪ್ರಕಟಿತ ದೇವರನಾಮಗಳ ಕೃತಿಯನ್ನೂ ಬಿಡುಗಡೆ ಮಾಡಿದರು. ಇನ್ನೊಂದು ಅಪ್ರಕಟಿತ ಕೃತಿಯಾದ 17ನೇ ಶತಮಾನದ ಶೃಂಗಾರಮ್ಮ ವಿರಚಿತ ಸಾಂಗತ್ಯಕೃತಿ 'ಪದ್ಮಿನೀ ಕಲ್ಯಾಣವನ್ನು' ಇತಿಹಾಸ ತಜ್ಞರೂ, ವಿದ್ವಾಂಸರೂ ಆದ ಪ್ರೊ|| ಜಿ. ಎಸ್. ದೀಕ್ಷಿತ್ ಅವರು ಬಿಡುಗಡೆ ಮಾಡಿದರು. ಈ ಕೃತಿಯನ್ನು ಶ್ರೀ ಎಸ್. ಶಿವಣ್ಣ ಅವರು ಸಂಪಾದಿಸಿ ಕೊಟ್ಟಿದ್ದಾರೆ.

3. ಎಂ. ವಿ. ಸೀ. ಸಮಗ್ರ ಸಾಹಿತ್ಯಮಾಲೆಯ ೩ನೇ ಸಂಪುಟ 'ಕವಿರಾಜಮಾರ್ಗ ವಿವಕ್ಷೆ ಬಿಡುಗಡೆ :

ಎಂ.ವಿ.ಸೀ. ಅವರ ಮಕ್ಕಳು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ರಾಘವ ಪ್ರಕಾಶನ ದತ್ತಿನಿಧಿಯ ಮೂಲಕ ಪ್ರಕಟಿಸಲು ಉದ್ದೇಶಿಸಿರುವ ಮೇಲ್ಕಂಡ ಮಾಲೆಯಲ್ಲಿ ಈಗಾಗಲೇ ಸಮಗ್ರ ಸಂಶೋಧನ ಲೇಖನ ಸಂಪುಟ 'ಕದಂಬ'ವನ್ನೂ ಪ್ರಸಿದ್ಧ ಸಂಪಾದಿತ ಕೃತಿ ಕವಿರಾಜ ಮಾರ್ಗವನ್ನೂ ಪ್ರಕಟಿಸಲಾಗಿದ್ದು, ಇದೀಗ ಅಂದೇ ಜಿ. ಎಸ್. ದೀಕ್ಷಿತರು ಈ ಕೃತಿಯನ್ನು ಬಿಡುಗಡೆ ಮಾಡಿದರು. ಈ ಕವಿರಾಜ ಮಾರ್ಗ ವಿವಕ್ಷೆ ಎಂ. ವಿ. ಸೀ. ಅವರು ಕವಿರಾಜಮಾರ್ಗದ ಬಗೆಗೆ ಬರೆದಿರುವ ಎಲ್ಲ ಲೇಖನಗಳ ಸಂಗ್ರಹವಾಗಿದೆ. ಶ್ರೀ. ಎನ್. ಎಸ್. ರಾಮಸ್ವಾಮಿ ಅಯ್ಯರ್ ಮತ್ತು ಶ್ರೀ. ನಾ. ಗೀತಾಚಾರ್ಯ ಅವರು ಈ ಮಾಲೆಯ ಎಲ್ಲ ಸಂಪುಟಗಳ ಸಂಯೋಜಕರಾಗಿರುತ್ತಾರೆ. ನಾಲ್ಕನೇ ಸಂಪುಟ ಸೀತಾರಾಮಯ್ಯನವರ ಸಾಹಿತ್ಯ ಸಮೀಕ್ಷೆ ಮತ್ತು ಇತರ ಸಮಗ್ರ ಸಂಪುಟವಾಗಿ ಹೊರ ಬರಲಿದೆ.

೪) ಟಿ. ಎಸ್. ಮಹದೇವಯ್ಯ ಜೀವನ ಸಾಧನೆ : ವಿಚಾರ ಗೋಷ್ಠಿ

ತುಮಕೂರಿನ ಟಿ. ಎಸ್. ಎಂ. ಸ್ಮಾರಕ ಗ್ರಂಥಮಾಲೆಯ ಸಹಕಾರದೊಂದಿಗೆ ದಿನಾಂಕ 30-6-96 ರಂದು ನಡೆಸಿದ ಈ ಕಾರ್ಯಕ್ರಮ ಇಡೀ ದಿನ ಜರುಗಿತು. ಅಂದು ಬೆಳಿಗ್ಗೆ 10 ಗಂಟೆಗೆ ಸಾಹಿತ್ಯ ಅಕಡೆಮಿಯ ಅಧ್ಯಕ್ಷರಾದ ಪ್ರೊ|| ಶಾಂತರಸ ಅವರು ಶ್ರೀ ಸಿಟ್ಟೂರು ಶ್ರೀನಿವಾಸರಾವ್ ಅವರ ಅಧ್ಯಕ್ಷತೆಯಲ್ಲಿ ಉದ್ಘಾಟನೆ ಮಾಡಿದರು. ಅನಂತರ ಮೊದಲ ಗೋಷ್ಠಿ ಪ್ರೊ|| ಎಲ್. ಎಸ್. ಶೇಷಗಿರಿ ರಾವ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀಯುತರು ಅಧ್ಯಕ್ಷತೆಯೊಂದಿಗೆ ಮಹದೇವಯ್ಯನವರ ವಿಮರ್ಶೆ ಲೇಖನಗಳನ್ನು ಕುರಿತು ಉಪನ್ಯಾಸವನ್ನು ನೀಡಿದರು. ಇದರೊಂದಿಗೆ ಶ್ರೀಮತಿ ಟಿ.ಎಂ.

ಅಮೃತ ಕುಮಾರಿ ಅವರಿಂದ 'ಜೀವನ ವ್ಯಕ್ತಿತ್ವ' ; ಡಾ || ಎನ್. ಎಸ್. ಲಕ್ಷ್ಮೀ ನಾರಾಯಣ ಭಟ್ಟ ಅವರಿಂದ 'ಕಾವ್ಯಗಳು', ಡಾ|| ಲಿಂಗದೇವರು ಹಳೆಮನೆ ಅವರಿಂದ ನಾಟಕಗಳನ್ನು ಕುರಿತು ಉಪನ್ಯಾಸಗಳು ನಡೆದವು.

ಮಧ್ಯಾಹ್ನ ಪ್ರೊ|| ಸಿ. ಮಹದೇವಪ್ಪ ಅವರ ಅಧ್ಯಕ್ಷತೆಯಲ್ಲಿ ಎರಡನೇ ಗೋಷ್ಠಿ ನಡೆಯಿತು. ಇದರಲ್ಲಿ ಪ್ರೊ|| ಎಂ. ಎಚ್. ಕೃಷ್ಣಯ್ಯ ಅವರಿಂದ 'ಕಾದಂಬರಿಗಳು', ಡಾ || ಎಸ್. ವಿದ್ಯಾಶಂಕರ ಅವರಿಂದ 'ವಚನಗಳು', ಪ್ರೊ|| ಬಿ. ವೀರಭದ್ರಯ್ಯ ಅವರಿಂದ 'ಅಪ್ರಕಟಿತ ಸಾಹಿತ್ಯ' ಕುರಿತು ಉಪನ್ಯಾಸಗಳು ನಡೆದವು.

ಬೆಳಗಿನಿಂದ ಸಂಜೆಯ ವರೆಗೆ ನಡೆದ ಬಿ. ಎನ್. ಮಹದೇವಯ್ಯನವರ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕುರಿತ ಚರ್ಚೆಯನ್ನು ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ ನವರು ತಮ್ಮ ಸಮಾರೋಪ ಭಾಷಣದಲ್ಲಿ ಅರ್ಥ ಪೂರ್ಣವಾಗಿ ವಿಶ್ಲೇಷಿಸಿದರು. 'ನಂದ ಕಿಶೋರ' ಕಾವ್ಯನಾಮದಿಂದ ಅಪಾರ ಸಾಹಿತ್ಯವನ್ನು ರಚನೆ ಮಾಡಿರುವ ಟಿ. ಎನ್. ಎಂ. ಅವರ ಜೀವಿತ ಅವಧಿಯಲ್ಲಿ ಪ್ರಕಟವಾದದ್ದು ಅತ್ಯಲ್ಪ. ಅವರ ಬಂಧುಗಳಾದ ವೀರಭದ್ರಯ್ಯನವರು ಟಿ. ಎನ್. ಎಂ. ಸ್ಮಾರಕ ಗ್ರಂಥಮಾಲೆಯ ಮೂಲಕ ಅವರ ಎಲ್ಲ ಸಾಹಿತ್ಯವನ್ನೂ ಪ್ರಕಟಿಸುವ ಸ್ತುತ್ಯ ಕಾರ್ಯ ಮಾಡುತ್ತಿದ್ದಾರೆ. ಆಚಾರ್ಯ ಬಿ. ಎಂ ಶ್ರೀ ಅವರ ಶಿಷ್ಯರಾಗಿ, ಎಂ. ಆರ್ ಶ್ರೀ, ಎ. ಆರ್. ಕೃ , ಬೆಳ್ಳಾವೆ ಅವರ ಸಮಕಾಲೀನ ರಾಗಿ ಉತ್ತಮ ಸಾಹಿತ್ಯ ರಚಿಸಿದ್ದರೂ ಸಾಹಿತ್ಯ ಲೋಕಕ್ಕೆ ಅಪರಿಚಿತರಾಗೇ ಉಳಿದಿದ್ದ ಟಿ. ಎನ್. ಎಂ. ಅವರ ೮೫ನೇ ವರ್ಷದ ಸಂಸ್ಮರಣೆಯ ಸಂದರ್ಭದಲ್ಲಿ ಪ್ರತಿ ಷ್ಠಾನ ಈ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಅಧ್ಯಕ್ಷರಾದ ಎನ್. ಬಸವರಾಧ್ಯ ಅವರು ಆರಂಭದಲ್ಲಿ ಸ್ವಾಗತಿಸಿ ಸಮಾರೋಪದಲ್ಲಿ ಅಧ್ಯಕ್ಷ ಭಾಷಣ ಮಾಡುತ್ತ ಇವರ ಹೆಸರಿನಲ್ಲಿ ಪ್ರತಿಷ್ಠಾನದಲ್ಲಿ ಒಂದು ದತ್ತಿ ನಿಧಿಯನ್ನು ಸ್ಥಾಪಿಸಲು ಆ ಮೂಲಕ ನಿರಂತರ ವಾಗಿ ಇವರ ಸ್ಮರಣೆಗೆ ನೆರವಾಗಲು ಬಂಧುಗಳು ಅಭಿಮಾನಿಗಳೆಲ್ಲ ಮುಂದಾಗಬೇಕೆಂದು ಸಲಹೆ ಮಾಡಿದರು. ಈ ಉದ್ದೇಶಕ್ಕಾಗಿ ಆರಂಭ ಕಾಣಿಕೆಯಾಗಿ ತಾವೇ 1,000.00 ರೂಗಳನ್ನು ನೀಡುವುದಾಗಿಯೂ ಘೋಷಿಸಿದರು.

ಪ್ರೊ. ಎ. ಶ್ರೀಪಾದ ಅವರು ಟಿ. ಎನ್. ಎಂ. ಅವರ ಕವನಗಳನ್ನು ಸುಶ್ರಾವ್ಯ ವಾಗಿ ಹಾಡಿದರು.ಶ್ರೀ. ನಾ. ಗೀತಾಚಾರ್ಯ ಅವರು ವಂದನಾರ್ಪಣೆ ಮಾಡಿದರು. ಡಾ|| ಡಿ. ವಿ. ಪರಮಶಿವಮೂರ್ತಿ ಅವರು ಗೋಷ್ಠಿಗಳನ್ನು ನಿರ್ವಹಿಸಿದರು.

## ೭) ಪ್ರತಿಷ್ಠಾನಕ್ಕೆ ದಾನ

**1.** ಧನ ಸಹಾಯ :ಪ್ರತಿಷ್ಠಾನದ ನಾನಾ ಕಾರ್ಯಕ್ರಮಗಳು ಹಾಗೂ ಉದ್ದಿಶ್ಯಗಳಿಗಾಗಿ ಅನೇಕ ಮಹನೀಯರು ದಾನ ನೀಡಿರುತ್ತಾರೆ. ಅವರೆಲ್ಲರಿಗೂ ಪ್ರತಿಷ್ಠಾನವು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಇನ್ನು ಮುಂದೆಯೂ ತಮ್ಮ ಉದಾರ ಸಹಾಯ ಸಹಕಾರಗಳನ್ನು ಕೊಡಬೇಕೆಂದು ಪ್ರಾರ್ಥಿಸುತ್ತದೆ.

1. ಸೋಸಲೆ ಅಯ್ಯಾ ಶಾಸ್ತ್ರಿಗಳ ಬಂಧುಗಳಾದ ಶ್ರೀಮತಿ ಇಂದಿರಾ ಶಾಸ್ತ್ರಿ ಅವರಿಂದ ಗ್ರಂಥ ಪ್ರಕಟನೆಗಾಗಿ 1,000-00 ರೂ.ಗಳು
2. ಪ್ರೊ|| ಗರ್ಗೇಶ್ವರಿ ವೆಂಕಟ ಸುಬ್ಬಯ್ಯನವರಿಂದ ಕಟ್ಟಡನಿಧಿಗೆ 1,000-00 ರೂ.ಗಳು
3. ಶ್ರೀ ಬಿ. ಎಸ್. ರಾಮಪ್ರಸಾದ್ ಅವರಿಂದ ಶಾಶ್ವತ ನಿಧಿಗೆ 500-00 ರೂ.ಗಳು
4. ಇತರರಿಂದ ಪ್ರತಿಷ್ಠಾನಕ್ಕೆ 1,560-00 ರೂ.ಗಳು

ದಾನವಾಗಿ ಬಂದಿದೆ.

**2. ಗ್ರಂಥದಾನ;–**

ಪ್ರತಿಷ್ಠಾನಕ್ಕೆ ಅನೇಕ ಮಹನೀಯರು ಗ್ರಂಥದಾನವನ್ನಿತ್ತು ಉಪಕರಿಸಿರುತ್ತಾರೆ.

1. ಪ್ರೊ|| ಎಚ್. ಕೃಷ್ಣಮೂರ್ತಿ, ಮೈಸೂರು ಅವರು - 155 ಪುಸ್ತಕಗಳನ್ನು
2. ಶ್ರೀ ಲೋಕಪ್ಪನವರು, ರಾಜೇಂದ್ರ ಪ್ರಿಂಟರ್ಸ್, ಮೈಸೂರು - 20 ಪುಸ್ತಕಗಳನ್ನು
3. ಶ್ರೀ. ಹಾ. ವೆಂ. ಶ್ರೀನಿವಾಸ ಮೂರ್ತಿ ಅವರು ಶಕ್ತಿ ಎಲೆಕ್ಟ್ರಿಕಲ್ ಪ್ರೆಸ್ 242 ಪುಸ್ತಕಗಳನ್ನು
4. ಶ್ರೀ ಜಿ. ಎಚ್. ಕೃಷ್ಣಮೂರ್ತಿಗಳು, ಮೈಸೂರು ಪ್ರಿಂಟರ್ಸ್ ಅಂಡ್ ಪಬ್ಲಿಷಿಂಗ್ ಹೌಸ್ ಅವರು 22 ಪುಸ್ತಕಗಳನ್ನು
5. ಪ್ರೊ|| ಎಂ. ಸತ್ಯನಾರಾಯಣರಾವ್ ಗೀತಾ ಬುಕ್ ಹೌಸ್, ಮೈಸೂರು. ಅವರು 76 ಪುಸ್ತಕಗಳನ್ನು
6. ಶ್ರೀ ರಮೇಶ್, ಉಷಾಪ್ರೆಸ್,ಮೈಸೂರು. ಅವರು 74 ಪುಸ್ತಕಗಳನ್ನು

ದಾನ ಮಾಡಿರುತ್ತಾರೆ.

**3. ಹಸ್ತಪ್ರತಿದಾನ ;–**

ಶ್ರೀ ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ ಅವರು 3(ಮೂರು) ಓಲೆ ಗ್ರಂಥಗಳನ್ನು ನೀಡಿರುತ್ತಾರೆ. ಅವರ ಸೂಚನೆಯಂತೆ "ವಾಲ್ಮೀಕಿ ರಂಗಾಚಾರ್ಯರ" ಹೆಸರಿನಲ್ಲಿ ಅವುಗಳನ್ನು ಸಂರಕ್ಷಿಸಲಾಗಿದೆ. ದಾನಿಗಳಿಗೆ ಪ್ರತಿಷ್ಠಾನವು ಈ ಅಮೂಲ್ಯ ದಾನಕ್ಕಾಗಿ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

**4. ಬಿ. ಎಂ. ಶ್ರೀ ಭಾವಚಿತ್ರ ದಾನ ;–**

ದಿ|| ತೀ.ನಂ.ಶ್ರೀ ಅವರ ಪುತ್ರರೂ ಪ್ರತಿಷ್ಠಾನದ ಕಾರ್ಯಸಮಿತಿ ಸದಸ್ಯರೂ ಆದ ತೀ. ಶ್ರೀ. ನಾಗಭೂಷಣ ಅವರು ಅವರ ಸಂಗ್ರಹದಲ್ಲಿದ್ದ ಬಿ. ಎಂ. ಶ್ರೀ ಅವರ ಅಪೂರ್ವವಾದ ಭಾವಚಿತ್ರವನ್ನು ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಈ ಎಲ್ಲ ಮಹನೀಯರಿಗೆ ಪ್ರತಿಷ್ಠಾನ ಆಭಾರಿಯಾಗಿದೆ. *

# ಅಭಿನಂದನೆ

---

## 1. ಚಿದಾನಂದ ಪ್ರಶಸ್ತಿ

ಗ್ರಂಥ ಸಂಪಾದನೆ ಮತ್ತು ಸಂಶೋಧನ ಗ್ರಂಥರಚನೆಗಳಿಂದ ಕನ್ನಡ ಸಾರಸ್ವತ ಲೋಕವನ್ನು ಉತ್ತುಂಗ ಪಡಿಸಿರುವ ಡಾ|| ಎಲ್. ಬಸವರಾಜು ಅವರಿಗೆ ಈ ಬಾರಿಯ ಡಾ|| ಚಿದಾನಂದ ಪ್ರಶಸ್ತಿಯನ್ನು 10-5-96 ರಂದು ಮೈಸೂರಿನಲ್ಲಿ ವಿತರಿಸಲಾಯಿತು.

## 2. ಚಾವುಂಡರಾಯ ಪ್ರಶಸ್ತಿ

ಶ್ರವಣ ಬೆಳ್ಗೊಳದ ಶ್ರೀಚಾರುಕೀರ್ತಿ ಭಟ್ಟಾರಕ ಸ್ವಾಮಿಗಳು ಶ್ರೀಗೋಮಟೇಶ್ವರ ಮಹಾಮಸ್ತಕಾಭಿಷೇಕದ ಸವಿನೆನಪಿಗಾಗಿ, ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಎರಡು ಲಕ್ಷ ರೂಗಳ ಚಾವುಂಡರಾಯ ಪ್ರಶಸ್ತಿಯ ದತ್ತಿನಿಧಿಯನ್ನು ಸ್ಥಾಪಿಸಿರುತ್ತಾರೆ. ಈ ಪ್ರಶಸ್ತಿ ೨೦ ಸಾವಿರ ರೂ.ಗಳ ಹಮ್ಮಿಣಿಯನ್ನೂ ಒಂದು ಫಲಕವನ್ನು ಪದಕವನ್ನೂ ಒಳಗೊಂಡಿದೆ. ಇದರ ಪ್ರಥಮ ಪ್ರಶಸ್ತಿ ಪ್ರದಾನವನ್ನು ಮೈಸೂರಿನಲ್ಲಿ ೪-೨-೧೯೯೬ ರಂದು ಕನ್ನಡದ ಹಿರಿಯ ಲೇಖಕರೂ ಖ್ಯಾತ ವಿದ್ವಾಂಸರೂ ಆದ ಡಾ|| ತ. ಸು. ಶಾಮರಾಯರಿಗೆ ನೀಡಲಾಯಿತು.

## 3. ಮಾಸ್ತಿ ಪ್ರಶಸ್ತಿ

ಪ್ರಸಕ್ತ ವರ್ಷದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸ್ಮಾರಕ ಪ್ರಶಸ್ತಿಯನ್ನು ಕನ್ನಡದ ಸುಪ್ರಸಿದ್ಧ ಕವಿಗಳಾದ ಶ್ರೀ. ಕೆ. ಎಸ್ ನರಸಿಂಹಸ್ವಾಮಿ ಅವರಿಗೆ ನೀಡಲಾಗಿದೆ. ಪ್ರಶಸ್ತಿಯು 15,000-00 ರೂಗಳನ್ನೂ ಒಂದು ಫಲಕವನ್ನೂ ಒಳಗೊಂಡಿರುತ್ತದೆ. ಜೂನ್ 16 ರಂದು ನಡೆದ ಸುಂದರ ಸಮಾರಂಭದಲ್ಲಿ ಈ ಪ್ರಶಸ್ತಿಯನ್ನು ನೀಡಲಾಯಿತು.

## 4. ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ

ಕನ್ನಡ ಸಾಹಿತ್ಯಕ್ಕೆ ಗಣನಾರ್ಹವಾದ ಕೊಡುಗೆ ನೀಡಿದವರೆಂದು ಗುರುತಿಸಿ, ಐವರು ಲೇಖಕರಿಗೆ ೧೯೯೬ ನೆಯ ವರ್ಷದ ಗೌರವ ಪ್ರಶಸ್ತಿಯನ್ನೂ ಹದಿನೆಂಟು ಮಂದಿ ಲೇಖಕರ ಉತ್ತಮ ಕೃತಿಗಳಿಗೆ ೧೯೯೫ನೆಯ ವರ್ಷದ ಬಹುಮಾನಗಳನ್ನೂ ಕರ್ನಾಟಕ ಸಾಹಿತ್ಯ ಅಕಾಡೆಮಿ ೪-೨-೧೯೯೬ರಂದು ಪ್ರಕಟಿಸಿದೆ. ಭಾಷಾ ವಿಜ್ಞಾನಿಯೆಂದು ಡಾ|| ಎಚ್. ಎಸ್. ಬಿಳಿಗಿರಿ, ದಲಿತ ಲೇಖಕ ದೇವನೂರು ಮಹದೇವ,

ಕ. ಸಾ. ಪರಿಷತ್ತಿನ ನಿಘಂಟಿನ ಸಂಪಾದಕ ಪ್ರೊ. ಎನ್ ಬಸವರಾಧ್ಯ, ಲೇಖಕಿ ಗೀತಾನಾಗಭೂಷಣ, ಕವಿ ವಿಮರ್ಶಕ ಬಿ. ಎ. ಸನದಿ- ಇವರು ಗೌರವ ಪ್ರಶಸ್ತಿ ವಿಜೇತರು. ಪ್ರತಿಯೊಬ್ಬರಿಗೆ ಹತ್ತು ಸಾವಿರ ರೂ ನಗದು ಮತ್ತು ಪ್ರಶಸ್ತಿ ಫಲಕಗಳನ್ನು ನೀಡಲಾಗುವುದು.

## 5. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

ಪ್ರಶಸ್ತಿ ಪತ್ರವನ್ನು ಒಳಗೊಂಡ ಇಪ್ಪತ್ತೈದು ಸಾವಿರ ರೂ.ಗಳ ನಗದಿನ ಪ್ರತಿಷ್ಠಿತ ಕೇಂದ್ರ ಸಾಹಿತ್ಯ ಅಕಾಡೆಮಿಯ ೧೯೯೫ನೆಯ ವರ್ಷದ ಪ್ರಶಸ್ತಿಯು ಪ್ರಸಿದ್ಧ ವಿಮರ್ಶಕರೂ ಚಿಂತಕರೂ ಆದ ಡಾ|| ಕೀರ್ತಿನಾಥ ಕುರ್ತಕೋಟಿ ಅವರಿಗೆ ದೊರಕಿದೆ.

## 6. 'ನಾಡೋಜ ಪ್ರಶಸ್ತಿ'

ಆಧುನಿಕ ಕನ್ನಡದ ಖ್ಯಾತ ಕವಿಗಳೂ ಪ್ರತಿಷ್ಠಾನದ ಗೌರವ ಸದಸ್ಯರೂ ಆದ ಡಾ|| ಪು. ತಿ. ನರಸಿಂಹಾಚಾರ್ ಅವರಿಗೂ ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ ಅವರಿಗೂ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ತನ್ನ ಎರಡನೆಯ ಘಟಿಕೋತ್ಸವ ದಲ್ಲಿ 'ನಾಡೋಜ' ಎಂಬ ಪ್ರತಿಷ್ಠಿತ ಗೌರವ ಪ್ರಶಸ್ತಿಯನ್ನು ನೀಡಿದೆ.

## ಅತ್ತಿಮಬ್ಬೆ ಪ್ರಶಸ್ತಿ

ಬೆಂಗಳೂರು ನಗರಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಅತ್ತಿಮಬ್ಬೆ ಪ್ರತಿಷ್ಠಾನ ಇವುಗಳ ಆಶ್ರಯದಲ್ಲಿ ೧೭-೩-೧೯೯೬ ರಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅತ್ತಿಮಬ್ಬೆ ಪ್ರಶಸ್ತಿ ಪ್ರದಾನ ಜರುಗಿತು. ಡಾ|| ಸಿ. ಅನ್ನಪೂರ್ಣಮ್ಮ ಮತ್ತು ಎ. ಪಂಕಜ ಇವರಿಬ್ಬರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ|| ಸಾ.ಶಿ.ಮರುಳಯ್ಯ ಅವರು ಪ್ರದಾನ ಮಾಡಿದರು. ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ನಾಗಮಣಿ ಎಸ್. ರಾವ್- ಅವರು ಇಬ್ಬರು ಲೇಖಕಿಯರನ್ನೂ ಅಭಿನಂದಿಸಿದರು.

ಈ ಎಲ್ಲ ಪ್ರಶಸ್ತಿ, ಗೌರವ ಪಡೆದ ಮಹನೀಯರಿಗೆ ಪ್ರತಿಷ್ಠಾನ ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸುತ್ತದೆ.

# ಶ್ರದ್ಧಾಂಜಲಿ

## 1. ಡಾ|| ಎಚ್. ಎಸ್. ಬಿಳಿಗಿರಿ

ಕನ್ನಡದ ಖ್ಯಾತ ಭಾಷಾವಿಜ್ಞಾನಿಗಳೂ ಆಧುನಿಕ ಕವಿಗಳಲ್ಲೊಬ್ಬರೂ ಆದ ಡಾ|| ಎಚ್. ಎಸ್. ಬಿಳಿಗಿರಿ ಅವರು ದಿನಾಂಕ ೧೦-೫-೧೯೯೬ ರಂದು ನವ ದೆಹಲಿಯಲ್ಲಿ ದಿವಂಗತರಾದರು. ಅವರಿಗೆ ಎಪ್ಪತ್ತೆರಡು ವರ್ಷ ವಯಸ್ಸಾಗಿದ್ದಿತು. ಮುಂಬಯಿ ವಿಶ್ವವಿದ್ಯಾಲಯದಲ್ಲಿ ಭಾಷಾಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿದ್ದ ಅವರು ಕೆಲಕಾಲ ಪುಣೆಯ ಡೆಕ್ಕನ್ ಕಾಲೇಜಿನಲ್ಲೂ ಭಾಷಾಶಾಸ್ತ್ರ ಪ್ರಾಧ್ಯಾಪಕರಾಗಿದ್ದರು. ಅವರ ಸಾಹಿತ್ಯ ಸಾಧನೆಗಾಗಿ ಗೌರವಿಸಿ ಇತ್ತೀಚೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ 1995ರ ಗೌರವ ಪ್ರಶಸ್ತಿಯನ್ನು ನೀಡಿತ್ತು.

'ಆಲೋಕ' ಎಂಬುದು ಅವರು ಶಬ್ದಮಣಿದರ್ಪಣಕ್ಕೆ ಬರೆದ ಪ್ರಸಿದ್ಧ ವ್ಯಾಖ್ಯಾನ ಕೃತಿ. ವರ್ಣನಾತ್ಮಕ ವ್ಯಾಕರಣದ ಮೂಲತತ್ವಗಳು, ಪರಸೆಗಳು, ನಂದನ, ಮುಂಡರ ಗಪ್ಪೆ, ನಾಯಿಕೊಡೆ- ಮುಂತಾದವು ಇತರ ಕೃತಿಗಳು. ಅವರು ಬರೆದಿದ್ದ 'ಭದ್ರಾವತಿ' ಎಂಬ ನೀಳ್ಗವಿತೆಗೆ ಬಿ. ಎಂ. ಶ್ರೀ. ಸ್ವರ್ಣಪದಕ ಲಭಿಸಿದ್ದಿತು. ವರ್ಣನಾತ್ಮಕ ಭಾಷಾ ವಿಜ್ಞಾನದಲ್ಲಿ ಕನ್ನಡ ವ್ಯಾಕರಣದಲ್ಲಿ ಪ್ರಕಾಂಡ ಪಾಂಡಿತ್ಯ ಗಳಿಸಿದ್ದ ದಿವಂಗತರು ಪ್ರತಿಷ್ಠಾನದ ಲೋಚನದಲ್ಲಿ ಹಲವಾರು ಲೇಖನಗಳನ್ನು ಪ್ರಕಟಿಸಿದ್ದರು.

## 2. ಪಂಡಿತ ಕೆ. ಪಿ. ಶಿವಲಿಂಗಯ್ಯ

'ಪುಲಿಕೇಶಿ' ಕಾವ್ಯನಾಮದಿಂದ ಹಲವಾರು ಕೃತಿಗಳನ್ನು ಬರೆದಿರುವ ವಿದ್ವಾಂಸರೂ ಆದ ಶ್ರೀ ಕೆ. ಪಿ. ಶಿವಲಿಂಗಯ್ಯನವರು 28-5-96 ರಂದು ನಿಧನರಾದರು. ಹಲವು ಕೃತಿಗಳ ಮೂಲಕ ಸಾಹಿತ್ಯವಲಯದಲ್ಲಿ ಚಿರಪರಿಚಿತರಾಗಿದ್ದ ದಿವಂಗತರಿಗೆ ಕೆಲವು ಪ್ರಶಸ್ತಿ, ಬಿರುದುಗಳೂ ಸಂದಿವೆ. ಪ್ರತಿಷ್ಠಾನದ ಹಿತೈಷಿಗಳಾಗಿ ಹಲವು ಕಾರ್ಯಕ್ರಮಗಳಲ್ಲಿ, ಯೋಜನೆಗಳಲ್ಲಿ ಸಹಕರಿಸಿ ಸಂಸ್ಥೆಯ ಬೆಳವಣಿಗೆಗೆ ನೆರವಾಗಿದ್ದರು.

## 3. ಎಂ. ಜೆ. ಕೋದಂಡರಾಮ ಶ್ರೇಷ್ಠಿ

ಸಾಹಿತ್ಯ ಮತ್ತು ಸಮಾಜ ಸೇವಾ ಧುರೀಣರಾಗಿದ್ದ ಶ್ರೀ ಎಂ. ಜೆ. ಕೋದಂಡರಾಮ ಶ್ರೇಷ್ಠಿ ಅವರು ಚಿಕ್ಕಮಗಳೂರಿಗೆ ಸಾಹಿತ್ಯ ವಲಯದ ತವರಾಗಿದ್ದರು. ಅಲ್ಲಿಗೆ ಭೇಟಿಕೊಟ್ಟ ಸಾಹಿತಿಗಳಿಗೆಲ್ಲ ಇವರ ಮನೆಯ ಔತಣದ ರುಚಿ ಇಲ್ಲದಿಲ್ಲ. ಜಿಲ್ಲಾ ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾಗಿ, ಹಲವಾರು ಸಂಘ ಸಂಸ್ಥೆಗಳ ಪೋಷಕರಾಗಿ

ಚಿಕ್ಕಮಗಳೂರಿನ ಸಾಹಿತ್ಯಕಾರ್ಯಗಳಿಗೆ ಪೋಷಕರಾಗಿರುತ್ತಿದ್ದ ಸ್ನೇಹಪರ, ಸಜ್ಜನಿಕೆಯ ಸಹೃದಯರಾಗಿದ್ದ ಕೋದಂಡರಾಮ ಶೆಟ್ಟರು ಇತ್ತೀಚೆಗೆ ನಿಧನರಾದದ್ದು ದುಃಖದ ಸಂಗತಿಯಾಗಿದೆ.

ಬಿ. ಎಂ. ಶ್ರೀ. ಪ್ರತಿಷ್ಠಾನದ ಹಿತೈಷಿಗಳಾಗಿದ್ದ ದಿವಂಗತರು ಚಿಕ್ಕಮಗಳೂರಿನಲ್ಲಿ ನಡೆದ ಪ್ರತಿಷ್ಠಾನದ ಕಾರ್ಯಗಳಿಗೆ ಅಪಾರವಾದ ಸಹಕಾರವನ್ನು ನೀಡಿದ್ದರು.

**4. ಸೇಡಿಯಾಪು ಕೃಷ್ಣಭಟ್ಟ. (೧೯೦೨-೧೯೯೬)**

ವ್ಯಾಕರಣ, ಛಂದಸ್ಸು, ಭಾಷಾಶಾಸ್ತ್ರಗಳಲ್ಲಿ ಹಾಗೂ ಸಂಶೋಧನೆಯಲ್ಲಿ ಅಪ್ರತಿಮ ಪಾಂಡಿತ್ಯವುಳ್ಳವರಾದ ಸೇಡಿಯಾಪು ಕೃಷ್ಣಭಟ್ಟರು ದಿನಾಂಕ 9-6-1996 ರಂದು ನಮ್ಮನ್ನಗಲಿದರು. ಅವರಿಗೆ 95 ವರ್ಷ ವಯಸ್ಸಾಗಿದ್ದಿತು. ಕನ್ನಡ ಪಂಡಿತ ಪರಂಪರೆಯಲ್ಲಿ ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ, ಕಡವ ಶಂಭುಶರ್ಮರಂತಹರ ಸಾಲಿಗೆ ಸೇರುವ ಇವರು ಶಾಲೆಯಲ್ಲಿ ಓದಿರುವುದು ಒಂಭತ್ತನೆ ತರಗತಿವರೆಗೆ ಮಾತ್ರವಾದರೂ ಮಾಡಿರುವ ಅಧ್ಯಯನ ಮತ್ತು ಗಳಿಸಿರುವ ಜ್ಞಾನ ಅಪಾರ. ಮಂಗಳೂರಿನ ಅಲೋಸಿಯಸ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದು ಅನಾರೋಗ್ಯದಿಂದ ಅವಧಿಗೆ ಮುಂಚೆ ನಿವೃತ್ತರಾದರು. 'ಪಳಮೆಗಳು' ಅವರ ಕಥಾ ಸಂಗ್ರಹ. ಚಂದ್ರಖಂಡ, ಶ್ವಮೇಧ ಅಥವಾ ನಾಯಿನಡತೆ ಕಾವ್ಯಕೃತಿಗಳು. ಛಂದೋಗತಿ, ತಥ್ಯದರ್ಶನ-ಶ್ರೇಷ್ಠ ರಚನೆಗಳು. ಅವರು ತೀರುವ ಎರಡು ದಿನ ಮುಂಚೆ, ಅವರ 95ನೆಯ ಹುಟ್ಟುಹಬ್ಬದ ಉಡುಗರೆಯಾಗಿ ತಥ್ಯದರ್ಶನದ ಇಂಗ್ಲೀಷ್ ಅನುವಾದ ಬಿಡುಗಡೆಯಾಗಿದ್ದಿತು. ಗ್ರಂಥ ಸಂಖ್ಯೆಗಿಂತ ಗ್ರಂಥಮೌಲ್ಯವೇ ಮಹತ್ತರವೆಂಬುದಕ್ಕೆ ಅವರ ಕೃತಿಗಳೇ ಸಾಕ್ಷಿಯಾಗಿವೆ. ಕೃತಿರಚನೆಯಿಂದಾಗಿ ಅವರಿಗೆ ಅನೇಕ ಪ್ರಶಸ್ತಿಗಳು ಪ್ರಾಪ್ತವಾಗಿವೆ. ಪ್ರತಿಷ್ಠಾನದ ಗೌರವ ಸದಸ್ಯರೂ ಲೋಚನದ ಲೇಖಕರೂ ಆಗಿದ್ದ ಕೃಷ್ಣಭಟ್ಟರು ಪ್ರತಿಷ್ಠಾನದ ಬಗೆಗೆ ಮೆಚ್ಚುಗೆಯುಳ್ಳವರಾಗಿದ್ದರು. ದಿವಂಗತರ ಲೇಖನವೊಂದು ಈ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಈ ಹಿರಿಯ ಚೇತನಗಳ ಅಗಲಿಕೆಯಿಂದ ಕನ್ನಡ ಸಾರಸ್ವತ ಲೋಕಕ್ಕೆ ಅಪಾರ ನಷ್ಟವಾಗಿದೆ. ಇವರುಗಳ ಆತ್ಮಕ್ಕೆ ಚಿರಶಾಂತಿ ಲಭಿಸಲೆಂದು ಪ್ರತಿಷ್ಠಾನ ಗೌರವ ಪೂರ್ವಕ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.



## ಈ ಸಂಚಿಕೆಯ ಲೇಖಕರು

೧. ಟಿ. ಕೇಶವ ಭಟ್ಟ
754, ಶ್ರೀ ವರ್ಧನ, 15ನೇ ಮುಖ್ಯ ರಸ್ತೆ,
ಬನಶಂಕರಿ 2ನೇ ಹಂತ, ಬೆಂಗಳೂರು–70

೨. ಸಿ. ನಟರಾಜ್
1430!4 8ನೆಯ ಅಡ್ಡರಸ್ತೆ
ಇರ್ವಿನ್ ರಸ್ತೆ ಮೈಸೂರು-1

೩. ಎಸ್. ಜಗನ್ನಾಥ್
'ಶಾಂಡಿಲ್ಯ' 2925
ಸರಸ್ವತೀಪುರಂ, 1ನೇ ಮುಖ್ಯ ರಸ್ತೆ
5ನೇ ಅಡ್ಡರಸ್ತೆ, ಮೈಸೂರು-9

೪. ವಿ. ಜೆ. ಪೂಜಾರ
ಪ್ರಾಧ್ಯಾಪಕರು, ಕನ್ನಡ
ಅಧ್ಯಯನ ಸಂಸ್ಥೆ, ಗುಲ್ಬರ್ಗಾ
ವಿಶ್ವವಿದ್ಯಾಲಯ, ಗುಲ್ಬರ್ಗ

೫. ವಾಲ್ಮೀಕಿ ಶ್ರೀನಿವಾಸ ಅಯ್ಯಂಗಾರ್ಯ
ರಾಮೇಶ್ವರ ತೋಟ, ಅಗ್ನಿಗ್ರಾಮ, ಹಾನುಬಾಳು ಹೋಬಳಿ
ಸಕಲೇಶಪುರ ತಾ || ಹಾಸನ ಜಿಲ್ಲೆ

೬. ಜಿ. ಎ. ಶಿವಲಿಂಗಯ್ಯ
370/1, ಡಿ. ಸುಬ್ಬಯ್ಯ ರಸ್ತೆ,
ಮೈಸೂರು-24

೭. ಭೀಮರಾವ್ ಚಿಟಗುಪ್ಪಿ
12/64 ತ್ರಿಮೂರ್ತಿ, ಕೇಲುಸ್ಕರ್
ರೋಡ್, ಶಿವಾಜಿ ಪಾರ್ಕ್,
ಮುಂಬಯಿ -28

೮. ರಾ. ಸತ್ಯನಾರಾಯಣ
ತ್ರಯೀಲಕ್ಷ್ಮಿ, 9ನೇಕ್ರಾಸ್
ಜಯನಗರ, ಮೈಸೂರು–14

೯. ಸಿ. ಮಹದೇವಪ್ಪ
ರಿಸರ್ಚ್ ಕಾರ್ನರ್, 187ನೇ
ಮುಖ್ಯ ರಸ್ತೆ, ಬೆಂಗಳೂರು-3

೧೦. ಎಸ್. ಎನ್. ಸಿಂಹ
ಉಪ್ಪುನೀರುಬಾವಿಬೀದಿ,
ಮೇಲುಕೋಟೆ.

೧೧. ಸನ್ಮೋತನಹಳ್ಳಿ ರಾಮರಾಯ
ಕೋಟೆಮನೆ, 518 4ನೇ ದೊಡ್ಡ
ಬೀದಿ, ಗೋಕುಲ 3ನೇ ಹಂತ,
9ನೇ ತಿರುವು, ಚಾಮರಾಜಪೇಟೆ,
ಬೆಂಗಳೂರು-18:

೧೨. ಎಸ್. ಆರ್.ಮಳಗಿ
ನಿವೃತ್ತ ಕನ್ನಡ ಪ್ರಾಧ್ಯಾಪಕ
10ಬಿ, 1ನೇ ಬ್ಲಾಕ್ ರಾಜಾಜಿ
ನಗರ, ಬೆಂಗಳೂರು- 10

೧೩. ಎನ್. ರಂಗನಾಥ ಶರ್ಮ
ಜಾನಕಿ ಕೃಪ, 83, 4ನೇ ಮೈನ್
ವಿಜಯನಗರ ಬೆಂ–40

## ಪ್ರತಿಷ್ಠಾನದ ಗೌರವ ಸದಸ್ಯರು

1) ಪ್ರೊ|| ಎ. ಎನ್. ಮೂರ್ತಿರಾವ್ 2) ಡಾ|| ಪು.ತಿ.ನ 3) ಪ್ರೊ|| ಎಸ್. ವಿ. ಪರಮೇಶ್ವರ ಭಟ್ಟ 4) ಪ್ರೊ|| ತ. ಸು. ಶಾಮರಾವ್ 5) ಡಾ|| ಜಿ. ಎಸ್. ದೀಕ್ಷಿತ್ 6) ವಿದ್ವಾನ್ ಎನ್. ರಂಗನಾಥ ಶರ್ಮ 7) ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ 8) ಡಾ. ಆರ್.ಸಿ. ಹಿರೇಮಠ್

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು.**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ವಿಜ್ಞಾನ ಕರ್ನಾಟಕ, ಮೈಸೂರು 2) ಸಾಧನೆ. ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು. 4) ಮಿಥಿಕ್ ಸೊಸೈಟಿ ಜರ್ನಲ್, ಬೆಂಗಳೂರು. 5) ಬಸವ ಪಥ, ಬೆಂಗಳೂರು. 6) ಶಂಕರ ಭಾಸ್ಕರ, ಬೆಂಗಳೂರು. 7) ಧರ್ಮಪ್ರಭ, ಬೆಂಗಳೂರು. 8) ಜಾನಪದ, ಜಗತ್ತು, ಬೆಂಗಳೂರು. 9) ಅಪರಂಜಿ, ಬೆಂಗಳೂರು 10) [illegible]ರ್ನಾಟಕ ಭಾರತಿ. ಧಾರವಾಡ. 11) ಸುಗುಣಮಾಲಾ, ಉಡುಪಿ [illegible]ತ್ಯಶುದ್ಧ ಕಾಯಕ ಸಿರಿಗೆರೆ. 13) ತರಳಬಾಳು, ಸಿರಿಗೆರೆ.

### ಕರ್ನಾಟಕ ಲೋಚನ : ಚಂದಾ [illegible]ವರ

| | | |
|---|---|---|
| ವಾರ್ಷಿಕ ಚಂದಾ | : | ವ್ಯಕ್ತಿಗಳಿಗೆ ರೂ. 15-00 |
| | | ಗ್ರಂಥಾಲಯ, ಸಂಘ-ಸಂಸ್ಥೆಗಳಿಗೆ ರೂ. 25-00 |
| | | **ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ** |
| ಆಜೀವ | : | ರೂ. 150-00 |
| ಪ್ರತಿಷ್ಠಾನದ ಸದಸ್ಯತ್ವ | : | ವಾರ್ಷಿಕ ರೂ. 25-00 ಆಜೀವ ರೂ.250-00 |
| ಬಿಡಿ ಪ್ರತಿ : | | ರೂ. 10-00 |

KARNATAKA LOCHANA Half Yearly Journal, Published by B. M. Sri. Smaraka Prathishthana, Masthi Nagara' (Gavipuram Extension), Bangalore-19.
Printed by : Prabhu Mudrana, Bangalore 78 Ph: 6640976

Reg. No. 03260/23/2/ALTC/88 KARNATAKA LOCHANA

# ಪ್ರತಿಷ್ಠಾನದ ಈಚಿನ ಪ್ರಕಟಣೆಗಳು

| | | ಉತ್ತಮ | ಸಾಧಾ |
|---|---|---|---|
| 1 | ಸಂಗಮರ ಕಾಲದ ವಿಜಯನಗರ | | 75-00 |
| 2. | ಕುಮಾರವ್ಯಾಸ ಭಾರತ ಸಂಗ್ರಹ | 75-00 | 40-00 |
| 3. | ಕಾವ್ಯ-ಇತಿಹಾಸ (ದತ್ತಿ ಉಪನ್ಯಾಸಗಳು) | | 10-00 |
| 4. | ಶಂಬಾ ಕೃತಿ ಸಮೀಕ್ಷೆ | | 35-00 |
| 5. | ಎಂ. ವಿ. ಸೀ. ಸಂಸ್ಮರಣೆ | | 25-00 |
| 6. | ವೈಚಾರಿಕ ಜಾಗೃತಿ | | 15-00 |
| 7. | ಹಸ್ತಪ್ರತಿಶಾಸ್ತ್ರ ಪರಿಚಯ | | 20-00 |
| 8. | ಸಂವಿಧಾನ ಮತ್ತು ಕಾನೂನು | | 25-00 |
| 9. | ಮಾಸ್ತಿ ಕಥಾ ಸಮೀಕ್ಷೆ | | 20-00 |
| 10. | ಮಾಸ್ತಿ[illegible] ವೆಂಕಟೇಶ ಅಯ್ಯಂಗಾರ್ (ಜೀವನ ಚಿತ್ರ) | | 15-00 |
| 11. | ಬಸ[illegible]ಲಯ, ಗಳು | | 25-00 |
| 12. | ನವ್ಯಸ[illegible]ಕ್ ಸಾಹಿತ್ಯ ಸಮೀಕ್ಷೆ) | | 35-00 |
| 13. | ಕದಂಬ ([illegible].ಸೀ. ಸಮಗ್ರ ಸಾಹಿತ್ಯ-1. ಸಮಗ್ರ ಸಂಶೋಧನ ಲೇಖನಗಳು) | 100-00 | 80-00 |
| 14. | ಕವಿರಾಜಮಾರ್ಗ (ಎಂ.ವಿ.ಸೀ. ಸಮಗ್ರ ಸಾಹಿತ್ಯ-2) | 100-00 | 80-00 |
| 15. | ಕವಿರಾಜಮಾರ್ಗ ವಿಮರ್ಶೆ (ಸಮಗ್ರ ಸಾಹಿತ್ಯ- 3 ಕವಿರಾಜಮಾರ್ಗವನ್ನು ಕುರಿತ ಲೇಖನಗಳು) | | |
| 16. | ಪದ್ಮಿನಿ ಕಲ್ಯಾಣ | | 15-00 |
| 17. | ಬೇಟೆರಾಯ ದೀಕ್ಷಿತರ ದೇವರನಾಮಗಳು ಮತ್ತು ಸಂಪ್ರದಾಯದ ಹಾಡುಗಳು | | 25-00 |

## ಸಿದ್ಧತೆಯಲ್ಲಿ

1. ತೌಲನಿಕ ಸಾಹಿತ್ಯ ಅಚ್ಚಿನಲ್ಲಿ
2. ತಿರುಕ್ಕುರುಳ್ (ಕನ್ನಡಾನುವಾದ)